DEC-79



# ಶ್ರೀವಾಣಿ

ಮಕ್ಕಳು ರಾಷ್ಟ್ರದ ಅತ್ಯಮೂಲ್ಯ ಸಂಪತ್ತು. ಇಂಥ ಸಂಪತ್ತನ್ನು ಕಡೆಗಣಿಸದೆ ಕಾಪಾಡುವುದು ಕೇವಲ ಕೌಟುಂಬಿಕ ಹೊಣೆ ಮಾತ್ರವಲ್ಲ; ಮೇಲಾಗಿ ರಾಷ್ಟ್ರದ ಹೊಣೆಯೂ ಹೌದು. ಕಾರಣ: ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು. ಇದನ್ನು ಮನಗಂಡ ಜಗತ್ತಿನ ರಾಷ್ಟ್ರಗಳು ಈ ವರ್ಷವನ್ನು "ಅಂತರರಾಷ್ಟ್ರೀಯ ಮಕ್ಕಳ ವರ್ಷ" ವೆಂಬುದಾಗಿ ಘೋಷಿಸಿವೆ, ಆ ಮಕ್ಕಳಿಗೆ ಪೌಷ್ಟಿಕಾಹಾರ, ನೈದಾನಿಕ ಸೌಲಭ್ಯ, ಉಚಿತ ವಿದ್ಯಾಭ್ಯಾಸ–ಮುಂತಾದುವುಗಳನ್ನು ದೊರಕಿಸಿ ಕೊಟ್ಟು, ಸತ್ಪ್ರಜೆಗಳನ್ನಾಗಿ ಕ್ರಿಯಾಶೀಲರನ್ನಾಗಿ ಮಾಡುವುದು ದೇಶದ ಕರ್ತವ್ಯವಾಗಿದೆ. ಈ ದಿಸೆಯಲ್ಲಿ ಮುಂಬರುವ ನಮ್ಮ ಕರ್ನಾಟಕರಾಜ್ಯ ಅದಕ್ಕಾಗಿ ಪ್ರತ್ಯೇಕ ಇಲಾಖೆಯನ್ನು 1975 ರಲ್ಲಿ ಸ್ಥಾಪಿಸಿದುದು ಸ್ತುತ್ಯಾರ್ಹ. ಆದರೆ ಈಗಾಗಲೇ ಆ ಮಕ್ಕಳ ಕಲ್ಯಾಣಕ್ಕಾಗಿ ಸ್ಥಾಪನೆಗೊಂಡಿರುವಂತೆ ಬಾಲವಾಡಿ, ಕ್ರೇಷ್, ಅನಾಥಾಶ್ರಮ, ಅಂಗವಿಕಲರ ಸಂಸ್ಥೆ ಮುಂತಾದ ಕೇಂದ್ರಗಳನ್ನು ಕೇವಲ ನಗರಗಲ್ಲಿ ಮಾತ್ರ ಸ್ಥಾಪಿಸಿದರೆ ಸಾಲದು; ಮೇಲಾಗಿ ಆ ಸೌಲಭ್ಯಗಳನ್ನು ಹಳ್ಳಿಗಳಿಗೂ ವಿಸ್ತರಿಸಬೇಕು. ಇಂದು ಗ್ರಾಮಾಂತರ ಪ್ರದೇಶಗಳಲ್ಲಿ ಸಾವಿರಾರು ಮಕ್ಕಳು ಹೊಟ್ಟೆಗಿಲ್ಲದೆಯೋ, ಅರೆಹೊಟ್ಟೆ ತಿಂದೋ, ಅರ್ಧ ಮೈಮುಚ್ಚಿಕೊಂಡೋ, ರೋಗಗ್ರಹಸ್ತರಾಗಿಯೊ ಶಾಲೆಗಳ ಮುಖದರ್ಶನವನ್ನೂ ಕೂಡ ಮಾಡದೆ ಬಸಣೆಪಡುತ್ತಿದ್ದಾರೆ. ಆ ಮಕ್ಕಳ ಸ್ವಾತಂತ್ರ್ಯ ಹಾಗೂ ಹಕ್ಕು ಭಾಧ್ಯತೆಗಳ ಬಗ್ಗೆ ಪ್ರಥಮ ಮಹಾಯುದ್ಧವಾದ ನಂತರ 'ಲೀಗ್ ಆಫ್ ನೇಷನ್ಸ್' ಅಸ್ತಿತ್ವಕ್ಕೆ ಬಂದು ಘೋಷಣೆ ಮಾಡಿದರೂ ಎರಡನೆ ಮಹಾಯುದ್ಧವಾದ ನಂತರ ಆ ಕೂಗು ಮರೆಯಾಯಿತು. ಆದರೆ 1946 ರಲ್ಲಿ ವಿಶ್ವಸಂಸ್ಥೆ ಉದಯವಾದ ಮೇಲೆ ಮಕ್ಕಳ ಅಗತ್ಯತೆಯ ಬಗ್ಗೆ ಶಾಸನವನ್ನೇ ಮಾಡಿ ಮುಖ್ಯವಾದ ಹತ್ತು ತತ್ವಗಳನ್ನು ಅಂಗೀಕರಿಸಿತು. ಆ ಪರಿಣಾಮವಾಗಿ 1979 ನೆಯ ವರ್ಷವನ್ನೂ 'ಅಂತರರಾಷ್ಟ್ರೀಯ ಮಕ್ಕಳ ವರ್ಷ' ವೆಂಬುದಾಗಿ ಘೋಷಿಸಿತು. ಇಷ್ಟಾದರೂ ಇಂದು ನಮ್ಮ ಭರತಖಂಡದಲ್ಲಿ ಸುಮಾರು 112 ದಶಲಕ್ಷ ಮಕ್ಕಳಿಗೆ ಯಾವಸೌಕರ್ಯವೂ ಇಲ್ಲ. ಪೌಷ್ಟಿಕಾಂಶದ ಕೊರತೆಯಿಂದ ಪ್ರತಿವರ್ಷ ಲಕ್ಷಾಂತರ ಮಂದಿ ಮಕ್ಕಳು ಮಡಿಯುತ್ತಿದ್ದಾರೆ. ಆದ್ದರಿಂದ ಒಟ್ಟಿನಲ್ಲಿ ರಾಷ್ಟ್ರದ ಅಮೂಲ್ಯಸಂಪತ್ತಾಗಿರುವ ಈ ಮಕ್ಕಳ ಸಂಪತ್ತನ್ನು ಚೆನ್ನಾಗಿ ಕಾಪಾಡಿಕೊಂಡುಬಂದಾಗ ಮಾತ್ರ ಸಮಾಜದ ನವನಿರ್ಮಾಣವಾಗಿ ದೇಶದ ಭವಿಷ್ಯ ಹಸನಾಗುವುದು.

# 'ಸಿದ್ಧಗಂಗಾ'

ಡಿಸೆಂಬರ್, ೧೯೭೯

ಸಂಪುಟ-೧೫ ಸಂಚಿಕೆ-೧೨

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ

ಪಂ|| ಚನ್ನಪ್ಪ ಎರೇಸೀಮೆ

ಪಿ. ಎಸ್. ಚಂದ್ರಶೇಖರಯ್ಯ

ವಿರೂಪಾಕ್ಷಯ್ಯ

ಬಸವರಾಜು

ಜಾಹಿರಾತು ವ್ಯವಸ್ಥಾಪಕರು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ಆಜೀವ ಸದಸ್ಯತ್ವ: **151-00** ರೂ

ವಾರ್ಷಿಕ ಚಂದಾ: **10-00** ರೂ


## ಈ ಸಂಚಿಕೆಯಲ್ಲಿ



### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"

"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]

ಶ್ರೀ ಸಿದ್ಧಗಂಗಾ ಕ್ಷೇತ್ರ-572131 ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1979ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು

'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ-572131 ತುಮಕೂರು ಜಿಲ್ಲೆ.

# ಸಂಪಾದಕೀಯ

ನಮ್ಮದು ಪ್ರಪಂಚದಲ್ಲಿಯೇ ಅತ್ಯಂತ ದೊಡ್ಡ ಪ್ರಜಾ ಪ್ರಭುತ್ವ ರಾಷ್ಟ್ರ. ಈ ದೊಡ್ಡ ಪ್ರಜಾತಂತ್ರ ರಾಷ್ಟ್ರವು ತನ್ನ ಸ್ವಾತಂತ್ರ್ಯ ನಂತರದ ಏಳನೆಯ ಲೋಕಸಭಾ ಚುನಾವಣೆಯನ್ನು ನಡೆಸಲು ಸರ್ವ ಸಿದ್ಧತೆಯನ್ನು ಮಾಡಿಕೊಂಡು ಸಮರ್ಪಕ ರೀತಿಯಲ್ಲಿ ನಿರ್ವಹಿಸಲು ಅಣಿಗೊಳ್ಳುತ್ತಿದೆ. ಆ ಚುನಾವಣೆಯು ಮುಕ್ತ ಹಾಗೂ ಸ್ವಚ್ಛತೆಯಿಂದ ಕೂಡಿರಬೇಕು. ಎಂದು ಮುಂತಾಗಿ ನಮ್ಮ ಈ ಬೃಹತ್ ದೇಶದ ಪ್ರಥಮ ಪ್ರಜೆಯನಿಸಿರುವ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿಯವರು ಜನತೆಯನ್ನುದ್ದೇಶಿಸಿ ಮೊನ್ನೆ ತಾನೆ ಆಕಾಶವಾಣಿಯಲ್ಲಿ ಪ್ರಸಾರ ಭಾಷಣ ಮಾಡಿದರು. ಕಾರಣ ನಮ್ಮ ಜನತೆ ತಮ್ಮ ಜನ ನಾಯಕರನ್ನು ಕೇವಲ ಎರಡುವರೆ ವರ್ಷದಲ್ಲಿ ಮತ್ತೆ ಚುನಾಯಿಸಬೇಕಾದ ಸಂದರ್ಭ. ಈ ಏಳನೆಯ ಸಾರ್ವತ್ರಿಕ ಮಧ್ಯಕಾಲಿನ ಚುನಾವಣೆ ಅಭಿವೃದ್ಧಿ ಹೊಂದುತ್ತಿರುವ ನಮ್ಮ ದೇಶದ ಜನತೆಗೊಂದು ದೌರ್ಭಾಗ್ಯದ ಸಂಗತಿ, ಅಂತಯೇ ಪ್ರಜ್ಞಾಪೂರ್ವಕ ನಿರ್ಣಯಕ್ಕೊಂದು ಸದವಕಾಶ.

ನಮ್ಮ ದೇಶದಲ್ಲಿ ಬೆಳೆಯುತ್ತಿರುವ ಅತಿ ಸಂತಾಪದ ಅತಿ ಪ್ರಸರಣದ ನಿಯಂತ್ರಣಕ್ಕೆ ಅಳವಡಿಸುವ ನಿರೋಧಿನಂತೆ, ದಿನಬೆಳಗಾದರೆ ಅತಿಪ್ರಸರಣಗೊಳ್ಳುವ ನಮ್ಮ ರಾಜಕೀಯ ಪಕ್ಷಗಳ ನಿಯಂತ್ರಣಕ್ಕೊಂದು ನಿರೋಧಿನ ಅವಶ್ಯಕತೆ ಇಂದು ಅಗತ್ಯವಾಗಿದೆ. ಎರಡು ಪಕ್ಷಗಳೇ ಬೇಕು ಮೂರು ಇಲ್ಲದಿರಬೇಕು. ಏತಕ್ಕೆಂದರೆ ಕಳೆದ 1977 ರ ಸಾರ್ವತ್ರಿಕ ಚುನಾವಣೆಯಲ್ಲಿ ಐದು ಪಕ್ಷಗಳು ಒಂದುಗೂಡಿ ಜನತಾ ಪಕ್ಷವಾಗಿ ಸ್ಪರ್ಧೆಯ ಕಣದಲ್ಲಿ ಬಂದಿದ್ದರೆ ಆ ಮೊದಲೇ 30 ವರ್ಷಗಳಿಂದ ಆಡಳಿತ ಮಾಡುತ್ತಾ ಬಂದಿದ್ದ ಕಾಂಗ್ರೆಸ್ ಪಕ್ಷ ಮತ್ತೊಂದು ಸ್ಪರ್ಧೆಯ ಕಣದಲ್ಲಿದ್ದು ಈ ಎರಡು ಪ್ರಧಾನ ಪಕ್ಷಗಳ ಜೊತೆಗೆ ಇನ್ನು ಕೆಲವಿದ್ದವು. 1980 ಜನವರಿಯಲ್ಲಿ ನಡೆಯುವ ಚುನಾವಣೆಯಲ್ಲಿ ಈ ಎರಡೂ ಪ್ರಧಾನ ಪಕ್ಷಗಳು ಒಡೆದು ಎರಡೆರಡಾಗಿವೆ. ಹೀಗೆ ಆದರೆ ಮುಂಬರುವ ಚುನಾವಣೆಗಳಲ್ಲಿ ಅತಿ ಪಕ್ಷ ಸಂತಾನದ ಅತಿರೇಖವಾಗುತ್ತದೆ. 80 ರ ಚುನಾವಣೆಯ ಸ್ಪರ್ಧೆಯ ಕಣದಲ್ಲಿರುವ ಸ್ಪರ್ಧಿಗಳ ಸಂಖ್ಯೆ ಇತಿಹಾಸದಲ್ಲಿ ಎಂದೂ ಇಲ್ಲದ್ದು, ಹೀಗೆ ಮುಂದುವರೆದರೆ ಹೀಗಿರುವ ಸಮಸ್ಯೆಗಳಿಗೆ ಮತ್ತೂ ಪೂರಕವಾಗುತ್ತವೆ. ಸಮಸ್ಯೆಗಳು ಅಧಿಕಗೊಳ್ಳುತ್ತಿವೆ ಚುನಾವಣಾ ವ್ಯವಸ್ಥೆ ಅದಗೆಡುತ್ತಿದೆ. ಖರ್ಚು ಇತ್ತೀಚಿನ ದಿನಗಳಲ್ಲಿ ಒಂದಕ್ಕೆರಡರಷ್ಟಾಗಿದೆ ಎಂಬುದು ಅಂಕಿ ಅಂಶಗಳಿಂದ ವೃತ್ತ ಪತ್ರಿಕೆಯಲ್ಲಿ ಪ್ರಕಟವಾಗಿದ್ದುದು ನೆನಪಿಗೆ ಬರುತ್ತದೆ.

ಮುಂಬರುವ ಚುನಾವಣೆಯಲ್ಲಿ ತಮ್ಮನ್ನು ಆರಿಸುವವರು ಜನತೆ. ಎಲ್ಲ ಪಕ್ಷಗಳವರಿಗೂ ನಾವು ಆರಿಸಿಬರಬೇಕೆಂದು ಪ್ರಬಲವಾದ ಅಪೇಕ್ಷೆ. ಹೊಸ ಕೇಂದ್ರ ಸರಕಾರವನ್ನು ಆರಿಸುವ ಮತದಾರನಿಗೆ ಎಲ್ಲ ಪಕ್ಷಗಳೂ ಆಶ್ವಾಸನೆ ನೀಡುವುದು ಮುಂಬರಲಿರುವ ಶುಭದಿನಗಳನ್ನೂ, ನಮ್ಮ ಪಕ್ಷಕ್ಕೆ ಇದನ್ನು ಸಾಧಿಸಿಕೊಡುವ ಶಕ್ತಿಸಾಮರ್ಥ್ಯ ...

ಯೆಂದು ಎಲ್ಲ ಪಕ್ಷಗಳವರೂ ಆಕಾಶವಾಣಿಯ ತಮ್ಮ ಪ್ರಸಾರದ ಸರದಿಯ ಪ್ರಕಾರ ಘೋಷಣೆಯನ್ನು ಮಾಡಿವೆ. ಅಲ್ಪ ಸ್ವಲ್ಪ ವ್ಯತ್ಯಾಸವನ್ನು ಬಿಟ್ಟರೆ ಮತದಾರನಿಗೆ ಎಲ್ಲ ಪಕ್ಷಗಳೂ ತಮ್ಮ ಚುನಾವಣಾ ಪ್ರಣಾಳಿಕೆಯಲ್ಲಿ ನೀಡಿರುವ ಆಶ್ವಾಸನೆಗಳ ಕೂಗು ಒಂದೇ ಆದರೂ ಈಡೇರಿಸುವ ಮಾರ್ಗಗಗಳು ಸ್ವಲ್ಪ ಬದಲಾವಣೆಯಿಂದ ಕೂಡಿರುವಂತೆ ತೋರುತ್ತಿವೆ.

ಬಡತನ ನಿವಾರಣೆ, ನಿರುದ್ಯೋಗ ನಿವಾರಣೆ, ಬೆಲೆ ಏರಿಕೆಯ ಮೇಲಿನ ನಿಯಂತ್ರಣ. ಅಲ್ಪ ಸಂಖ್ಯಾತರಿಗೆ ರಕ್ಷಣೆ. ದುರ್ಬಲ ವರ್ಗದವರಿಗೆ ಹೆಚ್ಚಿನ ಸೌಲಭ್ಯಗಳು, ಅಲಿಪ್ತ ನೀತಿಯ ಪಾಲನೆ ಮುಂತಾದವುಗಳು ಎಲ್ಲ ಪಕ್ಷಗಳದರ ಆಶ್ವಾಸನೆಯಾಗಿದೆ. ಇವುಗಳ ಪ್ರಮುಖ ಪಕ್ಷಗಳಾದ ಜನತಾ, ಲೋಕದಳ, ಕಾಂಗ್ರೆ ಮತ್ತು ಕಾಂಗ್ರೆಸ್ (ಯು) ಪಕ್ಷಗಳ ಒಂದು ಒಟ್ಟಾರೆ ತೌಲನಿಕ ಅಧ್ಯಯನದಿಂದ ಹೊರಬಿದ್ದ ಅಂಶ.

ಜನತಾ ಮತ್ತು ಕಾಂಗ್ರೆ ಪಕ್ಷಗಳು ಪ್ರತಿ ಕುಟುಂಬದಲ್ಲಿ ಕನಿಷ್ಠ ಪಕ್ಷ ಕುಟುಂಬದ ಒಬ್ಬ ವ್ಯಕ್ತಿಗಾದರೂ ಉದ್ಯೋಗಾವಕಾಶವನ್ನು ಒದಗಿಸುವ ಬರವಸೆಯನ್ನು ನೀಡಿವೆ. ಮತ್ತು ಗರಿಷ್ಠಮಟ್ಟದ ಉದ್ಯೋಗಾವಕಾಶವನ್ನು ಒದಗಿಸಿಕೊಡಬಲ್ಲ ಕೈಗಾರಿಕೀಕರಣದ ಸ್ಪಷ್ಟ ನೀತಿಯನ್ನು ಪ್ರತಿಪಾದಿಸಿವೆ.

ಎರಡೂ ಕಮ್ಯುನಿಷ್ಟ ಪಕ್ಷಗಳಾದ ಸಿ. ಪಿ. ಎ. ಫುತ್ತು ಸಿ. ಪಿ. ಎಂ ತಮ್ಮ ಪಕ್ಷಗಳ ಪ್ರತ್ಯೇಕ ನೀತಿ ಪಾಲನೆಗಿಂತ ಪ್ರಮುಖವಾಗಿ ಮೈತ್ರಿಕೂಟಕ್ಕೆ ಬೆಂಬಲವಿತ್ತ ಪಕ್ಷಗಳ ಮೇಲೆ ತಮ್ಮ ಆಶ್ವಾಸನೆಯ ಭಾರವನ್ನು ಹಾಕಿರುವಂತೆ ಕಾಣಬರುತ್ತದೆ.

ಹಾಗೆಯೇ ಪ್ರಾದೇಶಿಕ ಪಕ್ಷಗಳಲ್ಲೊಂದಾದ ಡಿ. ಎಂ. ಕೆ. ಪಕ್ಷವು ತನ್ನ ಬೆಂಬಲವನ್ನು ದೇಶಕ್ಕೆ ಅಗತ್ಯವಾದ ಸುಭದ್ರ ಸರಕಾರವನ್ನು ಕಾಂಗ್ರೆ ಒಂದೇ ನೀಡಬಲ್ಲದೆಂದೂ ತಿಳಿಸಿ, ಅಂತೂ ಕೇಂದ್ರಕ್ಕೆ ಸುಭದ್ರ ಸರಕಾರ ಇರಬೇಕೆಂದು ಅದರ ಪ್ರಬಲ ಇಚ್ಛೆಯಾಗಿದೆ. ಡಿ. ಎಂ. ಕೆ ಯ ಪ್ರತಿ ಪಕ್ಷವಾದ ಎ. ಐ. ಎ. ಡಿ. ಎಂ. ಕೆ. ಪಕ್ಷವು ಸರ್ವಾಧಿಕಾರದ ವಿರುದ್ಧ ಚುನಾವಣೆಯಲ್ಲಿ ಸೆಣಸಿ ದುರ್ಬಲ ವರ್ಗದ ಅಭಿವೃದ್ಧಿಗೆ ಜನತಾ ಸರಕಾರದ ನಾಯಕತ್ವಕ್ಕೆ ಬೆಂಬಲ ಸೂಚಿಸಿದೆ.

ಒಟ್ಟಿನಲ್ಲಿ ಸಮರ್ಥ ಹಾಗೂ ಯೋಗ್ಯವಾದ ಸರಕಾರವನ್ನು ಆಯ್ಕೆ ಮಾಡುವ ಸುವರ್ಣ ಸದವಕಾಶ ಪ್ರತಿಯೊಬ್ಬ ಮತದಾರನಿಗೂ ದೊರಕಿಸಿಕೊಟ್ಟಿದೆ 1980 ರ ಚುನಾವಣೆ. ಪ್ರತಿಯೊಬ್ಬ ಮತದಾರನೂ ಎಲ್ಲ ಪಕ್ಷಗಳ ಆಶ್ವಾಸನೆಯನ್ನು ಮನಗಂಡು ವಿವೇಕ ಬುದ್ಧಿಯುಳ್ಳವನಾಗಿ ಮತ ಚಲಾಯಿಸಬೇಕು. ನಮ್ಮ ಭವಿಷ್ಯದ ಬಾಳು ಹಸನಾಗಿರುವ ನೆಮ್ಮದಿಯ ಸುಖ ಸಂಮೃದ್ಧಿಯ ಜೀವನವನ್ನು ದೊರಕಿಸಿಕೊಟ್ಟು ನಿರಾತಂಕವಾಗಿ ಬದುಕುವ ಸ್ವತಂತ್ರ ಬಾಳನ್ನು ಸಾಗಿಸುವ ಸುಭದ್ರ ಸರಕಾರವನ್ನು ಆರಿಸುವ ಶಕ್ತಿ ನಮ್ಮದಾಗಬೇಕೆಂದು ಪ್ರಬಲ ಆಕಾಂಕ್ಷೆ ಅಷ್ಟೆ.

+++ +++ +++

ಅನಿವಾರ್ಯ ತಾತ್ವಿಕ ತೊಂದರೆಗಳಿಂದ ಡಿಸೆಂಬರ್ ಪತ್ರಿಕೆಯು ತಮಗೆ ತಡವಾಗಿ ತಲುಪುತ್ತಿದೆ ಎಂದು ಹೇಳಲು ವಿಷಾದಿಸುತ್ತೇನೆ. ಎಂದಿನಂತೆ ನಮ್ಮ ಓದುಗ ಮಹಾಶಯರು ಪುರಸ್ಕರಿಸಿ ಮುಂದೆಯು ತಮ್ಮ ಸದಸ್ಯತ್ವವನ್ನು ಮುಂದುವರಿಸಿಕೊಂಡು ಬರುತ್ತೀರೆಂದು ಈ ಮೂಲಕ ತಮುಲ್ಲಿ ವಿನಮ್ರ ಪ್ರಾರ್ಥನೆ.



ಸಿದ್ಧಗಂಗಾ

## ಅಮೃತ ಬಿಂದು

"ಮನುಷ್ಯನ ಬದುಕು ಕಷ್ಟ-ಸುಖಗಳ ದ್ವಂದ್ವ ರೂಪವಾದದ್ದು. ಸುಖಾಪೇಕ್ಷಿಯಾಗಿ ಬದುಕುವ ಇಚ್ಛೆಯನ್ನುವ್ಯಕ್ತಿ ಮುಂದುಮಾಡುತ್ತಾನೆ. ಸುಖಪಡುವ ಆಸೆಯ ಅಮಲಿನಲ್ಲಿ ಕಷ್ಟವನ್ನು ಅನುಭವಿಸುವ ಗೋಜಿಗೆ ಹೋಗುವುದಿಲ್ಲ. ಕಷ್ಟವೆಂದರೆ ಎಲ್ಲರೂ ಅದನ್ನು ದೂಷಿಸುವರೆ. ಈ ಕಷ್ಟವು ಎಲ್ಲಿಂದಲೋ ಬರುವ ಪದಾರ್ಥವಲ್ಲ. ಅದನ್ನು ಆಹ್ವಾನಿಸುವರೂ ನಾವೇ ಕಷ್ಟ ಬಂದಾಗ ಅದನ್ನು ಇನ್ನೊಬ್ಬರ ಮೇಲೆ ಹೇರುತ್ತೇವೆ. ದಾರಿಯಲ್ಲಿ ನಡೆಯುವಾಗ ಒಂದು ಕಲ್ಲಿಗೋ ಮರದ ಬೇರಿಗೋ ಎಡವಿ ಬಿದ್ದು ಗಾಯಮಾಡಿಕೊಳ್ಳುತ್ತೇವೆ. ಆ ಗಾಯವನ್ನು ನೋಡಿದ ನಮ್ಮ ಸ್ನೇಹಿತರು ಕೇಳಿದರೆ ದಾರಿಯಲ್ಲಿ ತನ್ನ ಪಾಡಿಗೆ ಬಿದ್ದಿದ್ದ ಕಲ್ಲನ್ನೋ ಮರವನ್ನೋ ಇದಕ್ಕೆ ದೂರುತ್ತೇವೆ. ಹಾಗೆಯೇ ಜೀವನದಲ್ಲಿ ಇಂತಹ ಪ್ರಸಂಗಗಳನ್ನು ದಿನನಿತ್ಯದ ವ್ಯವಹಾರದಲ್ಲಿ ಬಹಳಷ್ಟು ನೋಡುತ್ತೇವೆ, ತಮ್ಮ ಕಷ್ಟಕ್ಕೆ ಬೇರೊಬ್ಬರನ್ನು ನಿಂದಿಸುತ್ತೇವೆ, ತಮ್ಮ ತಪ್ಪನ್ನು ಮರೆತು. ಇದಕ್ಕೆ ನಮ್ಮ ಕ್ರಮವಿಲ್ಲದ ಹಾಗೂ ನಿಯಮವಿಲ್ಲದ ಜೀವನ ಕ್ರಮವೇ ಕಾರಣವೆಂಬುದನ್ನು ನಾವು ತಿಳಿಯುವುದಿಲ್ಲ. ಒಬ್ಬ ಸಂತರ ನುಡಿ "ಕ್ರಮತಪ್ಪಿ ನಡೆವುದರಿಂ ಕಷ್ಟಮುಂಟಿ" ಎಂದಿದ್ದಾರೆ. ಹಾಗೆಯೇ ನಿಯಮದಂತೆ ನಡೆಯುವವನು ಯಮನನ್ನೂ ಜಯಿಸುತ್ತಾನೆನ್ನುವುದು ಅನುಭವೋಕ್ತಿ.

-ದುಂಬಿ

## ನವನೀತ

**ಅಕೃತಾತ್ಮಾನಮಾಸಾದ್ಯ ರಾಜಾನಮನಯೇ. ರತಂ ।**
**ಸಮೃದ್ಧಾನಿ ವಿನಶ್ಯಂತಿ ರಾಷ್ಟ್ರಾಣಿ ನಗರಾಣಿ ಚ ॥**
**—ರಾಮಾಯಣ**

ಜಿತೇಂದ್ರಿಯನಲ್ಲದ ಮತ್ತು ದುರ್ನೀತಿಯಲ್ಲಿ ಆಸಕ್ತನಾದ ರಾಜನಿದ್ದರೆ ರಾಷ್ಟ್ರಗಳೂ ನಗರಗಳೂ ಎಷ್ಟೇ ಸಂಮೃದ್ಧವಾಗಿ ಕೂಡಿದ್ದರೂ ನಾಶವಾಗುತ್ತವೆ.

★ ★ ★

**ವಿದ್ಯಾ ಪ್ರವಸತೋ ಮಿತ್ರಂ ಭಾರ್ಯಾ ಮಿತ್ರಂ ಗೃಹೇ ಸತಃ।**
**ಆತುರಸ್ಯ ಭಿಷಕ್ ಮಿತ್ರಂ ದಾನಂ ಮಿತ್ರಂ ಮರಿಷ್ಯತಿ ॥**
**—ಸುಭಾಷಿತ ಸುಧಾನಿಧಿ**

ಪ್ರವಾಸ ಮಾಡುವವನಿಗೆ ವಿದ್ಯೆ ಸ್ನೇಹಿತನು. ಮನೆಯಲ್ಲಿರುವವನಿಗೆ ಹೆಂಡತಿ ಮಿತ್ರಳು. ರೋಗಿಗೆ ವೈದ್ಯ ಸ್ನೇಹಿತನು. ಹಾಗೆಯೇ ಸಾಯುವವನಿಗೆ ದಾನವೇ ಮಿತ್ರನು.

★ ★ ★

**ನ ಪರಃ ಪಾಪಮಾದತ್ತೇ ಪರೇಷಾಂ ಪಾಪಕರ್ಮಣಾಂ ।**
**ಸಮಯೋ ರಕ್ಷಿತವ್ಯಸ್ತು ಸಂತಶ್ಚಾರಿತ್ರ ಭೂಷಣಾಃ ॥**
**—ರಾಮಾಯಣ**

ತನಗೆ ಅಪಕಾರವನ್ನು ಮಾಡಿದವನಿಗೆ ಪ್ರಾಜ್ಞನಾದವನು ತಿರುಗಿ ಅಪಕಾರವನ್ನು ಮಾಡುವುದಿಲ್ಲ. ಸದಾಚಾರವನ್ನು ಅವಶ್ಯವಾಗಿ ಪಾಲಿಸಬೇಕು. ಸಜ್ಜನರಿಗೆ ಒಳ್ಳೆಯ ನಡತೆಯೇ ಭೂಷಣ.

★ ★ ★

# ದೊಡ್ಡವರಾರು ?

( ಕಿರುತತ್ವವಾದ ) —ಎನ್. ಎಸ್. ಗದಗಕರ

ತ್ರಿಲೋಕ ಸಂಚಾರಿಯಾದ ದೇವರ್ಷಿ ನಾರದರ ಮನಸ್ಸಿನಲ್ಲಿ ಒಮ್ಮೆ ಒಂದು ಸಂಸಯ ಸುಳಿಯಿತು —ಈ ಸಮಗ್ರ ಸೃಷ್ಟಿಯಲ್ಲಿ ದೊಡ್ಡವರಾರು ? ಎಂದು

ಅವರು ಯಾವ ಲೋಕಕ್ಕೆ ಹೋದರೂ ಅದರ ಅಧಿ ಪತಿಯೇ ದೊಡ್ಡವನೆಂದು ಅನ್ನುತ್ತಿದ್ದರು.

ತ್ರಿಮೂರ್ತಿಗಳಲ್ಲಿ ಕೂಡ ತೀರ ವಿಭಿನ್ನ ನಿರೂಪಣೆಯ ಮೂಲಕ ಯಾರು ನಿಜವಾಗಿಯೂ ದೆಡ್ಡವರೆಂಬುದು ಅವರಿಗೆ ಸಂದೇಹಾಸ್ಪದವಾಗಿ ತೋರಿತು.

ಈ ಪ್ರಸಂಗದಲ್ಲಿ ಶ್ರೀಮನ್ನಾರಾಯಣನೇ ಸಂಷಯ ನಿವಾರಿಸಲು ಸಮರ್ಥನೆಂದು ಬಗೆದು ಅವರು ನೇರವಾಗಿ ವಿಷ್ಣು ಲೋಕಕ್ಕೆ ಸಾಗಿದರು.

ನಾರಾಯಣನು ಮಹರ್ಷಿಗಳನ್ನು ಕಂಡೊಡನೆ ಅವರ ಮನದಲ್ಲಿಯ ಸಂಶಯ ಗೋಚರಿಸಿತು.

ಇನ್ನೂ ನಾರದರು ತುಟಿಬಿಚ್ಚುವ ಮೊದಲೆ ಪ್ರಭು ನಾರಾಯಣನು ನುಡಿದನು—; ನಾರದ ನೀನೇಕೆ ಬಂದಿರುವಿ ಎಂಬುದು ಹೊಳೆಯಿತು. ನಾನು ಹೇಳಿದುದನೆಲ್ಲ ಕೇಳಿಕೊ. ಅಂದರೆ ನಿನ್ನ ಸಂಶಯ ನಿವಾರಣೆ ಆದೀತು. ಬೇರೆಯವರ ವಿವರಣೆಯೇ ಅನಾವಶ್ಯಕ. ಎಲ್ಲ ಲೋಕದಲ್ಲಿ ಪೃಥ್ವಿ ವಿಸ್ಮಯಕಾರಿಯಾದುದು. ಅದು ಸಕಲ ಚರಾಚರ ವಸ್ತುಗಳ ನಿಲಯು. ಅಲ್ಲಿ ಕೋಟ್ಯಾಂತರ ಜೀವಿಗಳುಂಟು ಇದು ದೊಡ್ಡದೆನಿಸುವುದು ಸಹಜ ಆದರೆ ಇದು ಮಹಾ ಸಾಗರದಲ್ಲಿ ತೇಲುತ್ತಿರುವುದು ನಿನಗೆ ಗೊತ್ತು. ಆದರೆ ನೋಡು, ಇಂಥ ಬೃಹತ್ ಸಾಗರವನ್ನು ಒಂದೇ ಗುಟುಕಿನಲ್ಲಿ ಅಗಸ್ತ್ಯನು ಕುಡಿದು ಬಿಟ್ಟ. ಅಂತೇ ಮಹಾಸಾಗರಕ್ಕಿಂತ ಅಗಸ್ತ್ಯ ದೊಡ್ಡವನೆನಿಸುವನಲ್ಲವೆ ?

ಈಗ ನೋಡು, ಇಂಥ ಮಹರ್ಷಿ ಒಂದು ಚಿಕ್ಕಿಯಾಗಿ ಲಕ್ಷ್ಯಾಂತರ ಸಂಖ್ಯೆಯಲ್ಲಿ ಒಂದಾಗಿ ಆಕಾಶದಲ್ಲಿ ಲೀನನಾಗಿರುವ. ಇದರಿಂದ ಆಕಾಶವು ಅತ್ಯಂತ ವಿಸ್ತ್ರತ, ಮಹತ್ತಮ ಎಂದು ಎನಿಸುವುದು. ಇಂಥ ಆಗಸಕ್ಕಿಂತ ಹಿರಿದು ಇನ್ನೆನಾದರು ಇರಲು ಸಾಧ್ಯವೆ ಎಂಬ ಸಮಸ್ಯೆ ಎದುರಿಸೀತು ! ಆದರೆ ಮಹಾ ವಾಮನ ಮೂರ್ತಿ ಬಲಿಚಕ್ರವರ್ತಿಯನ್ನು ಅಧೋ ಲೋಕಕ್ಕೆ (ಪಾತಾಳ) ನೂಕಿದ ಒಂದು ಪಾದದಿಂದ. ಇನ್ನೊಂದರಿಂದ ಆಕಾಶವನ್ನು ಆವರಿಸಿದ.

ಈ ಕ್ಷಣಕ್ಕೆ ನಾರದನು ಮಹಾಪ್ರಭುವನ್ನು ತಡೆದು ನುಡಿದ "ಮಹಾಪ್ರಭು, ಸಾಕು ಸಾಕು. ನಿನ್ನ ಘನವಂತಿಕೆ ನನಗೆ ಹೊಳೆಯಲಿಲ್ಲ ಕ್ಷಮಿಸು. ಮಹದಪರಾಧವಾಯಿತು."

ಆಗ ಶ್ರೀಮನ್ನಾರಾಯಣನು ಮುಗುಳು ನಗೆ ನಕ್ಕು ನುಡಿದ— ನಾರದಾ, ನಾನು ನನ್ನ ದೊಡ್ಡಸ್ತಿಕೆಯನ್ನು ಕೊಚ್ಚಿಕೊಳ್ಳಲು ಈ ಕತೆ ಬಾಸಿರಲಿಲ್ಲಿ. ನನಗಿಂತಲೂ ದೊಡ್ಡವರುಂಟು. ನನ್ನ ಮಾತನ್ನು ಪೂರ್ತಿ ಕೇಳಿಕೊಳ್ಳದೆ ನಾರದಾ ನಿನೇಕೆ ಆತುರನಾಗಿರುವಿ ? ಅವಸರ ಪಟ್ಟುಕೊಳ್ಳುವೆ ಏಕೆ ?

ನಾರದನು ಅತ್ಯಂತ ಆಶ್ಚರ್ಯ ಚಿಕಿತನಾಗಿ ಪ್ರಭುವಿಗೆ ಕೇಳಿದ—ಪ್ರಭು, ತಮಗಿಂತಲೂ ದೊಡ್ಡವರುಂಟೆ ?

ಮಹಾ ವಿಷ್ಣು ನುಡಿದನು–ಹೌದು, ನಾರದಾ ನನಗಿಂತಲೂ ಒಬ್ಬವ ದೊಡ್ಡವನಿರುವ. ನಾನು ಭಕ್ತನ ಹೃದಯದಲ್ಲಿ ಒಂದು ಮೂಲೆಯಲ್ಲಿ ವಾಸಿಸುವೆ. ಅವನು ನನ್ನನ್ನು ಭದ್ರವಾಗಿರಿಸಿಕೊಂಡು ತನ್ನ ಕೆಲಸ ಮಾಡಲು ಆಜ್ಞಾಪಿಸುವ. ನನ್ನ ಭಕ್ತನೇ ನನಗಿಂತ ದೂಡ್ಡವನೆಂದು ನಿನಗೆ ಅರ್ಥವಾಯಿತೆ, ನಾರದಾ ?

ಈ ಮಾತನ್ನು ಕೇಳಿ ನಾರದನ ಅಚ್ಚರಿಗೆ ಸೀಮೆ ಉಳಿಯಲಿಲ್ಲ. ಅವನು ಮೂಕ ವಿಸ್ಮಿತನಾದನು.

(ಆಧರಿಸಿದುದು) —



# ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ

—ಗೋ. ರು. ಚ.

ಸಾಹಿತ್ಯದ ಮೂಲವಾದ ಭಾಷೆ ಮಾನವನ ಹುಟ್ಟನೊಂದಿಗೆ ಬೆಳೆದು ಬಂದುದು, ನಿತ್ಯ ವ್ಯವಹಾರದ ಸಂಭಾಷಣೆಗೆ ಸೀಮಿತವಾಗಿದ್ದ ಭಾಷೆ ಕ್ರಮೇಣ ಮಾನವನ ಕಲ್ಪನೆ, ಭಾವನೆ, ಆಸೆ–ಆಕಾಂಕ್ಷೆ, ನೋಟ ನಿರೀಕ್ಷೆಗಳ ಅಭಿವ್ಯಕ್ತಿಯ ಸಾಧನವೂ ಆಯಿತು. ಆಗಲೆ ಭಾಷೆಗೆ ಸಾಹಿತ್ಯದ ಸ್ವರೂಪ ಬಂದುದು. ಆರಂಭದಲ್ಲಿ ರೂಪುಗೊಂಡ ಸಾಹಿತ್ಯ ಗ್ರಂಥಸ್ಥವಾಗಿರಲಿಲ್ಲ. ವ್ಯಕ್ತಿಯ ಬಾಯಿಂದ ಬಾಯಿಗೆ ಹರಿದು ಬಂದ "ಶೃತಿ" ಯಾಗಿತ್ತು. ಮಾನವನ ನಾಗರೀಕತೆ ಬೆಳೆದಂತೆ ಅದು "ಕೃತಿ'ಯ ರೂಪ ತಾಳಿತು.

ಸಾಹಿತ್ಯ ಮಾನವನ ಸೃಷ್ಟಿಯಾದರೂ ಅದರ ಪರಮಗುರಿ ಮಾನವನ ಕಲ್ಯಾಣ. ಭೌ ಜಗತ್ತಿನಲ್ಲಿರುವ ಮಾನವ ಅನೇಕ ವೇಳೆ ತನ್ನ ಸ್ಥಿಮಿತ ಕಳೆದುಕೊಂಡು ಆಸೆ–ಅಮಿಷಗಳಿಗೆ ಬಲಿಯಾಗಿ ದುಃಖಕ್ಕೆ ಸಿಕ್ಕಿಕೊಳ್ಳುತ್ತಾನೆ. ಅಂತಹ ಸಂದರ್ಭದಲ್ಲಿ ಸಾಹಿತ್ಯ ಅವನ ನೆರವಿಗೆ ಬರುತ್ತದೆ. ಅವನಲ್ಲಿ ಪಶ್ಚಾತ್ತಾಪ ಹುಟ್ಟಿಸಿ ಮತ್ತೆ ಉತ್ಥಾನದ ದಾರಿ ತೋರುತ್ತದೆ. ಅವನ ಜೀವನ ಹೆಜ್ಜೆ–ಹೆಜ್ಜೆಗೂ ದೈವೀ ಪ್ರಜ್ಞೆಯನ್ನು ಮೂಡಿಸಿ, ಕರ್ತವ್ಯ ನಿಷ್ಠೆಯನ್ನು ಮೈಗೂಡಿಸಿ ದೃಡವಾದ ಆತ್ಮವಿಶ್ವಾಸ ಮೂಡಿಸುವ ಚೇತನ ಶಕ್ತಿ ಸಾಹಿತ್ಯ. ಆ ದೃಷ್ಟಿಯಿಂದಲೇ ಮಾನವ ಸಾಹಿತ್ಯದ ಆರಾಧಕನಾಗಿರುವುದು, ಪೋಷಕನಾಗಿರುವುದು. ಬಹುಶಃ ಸಾಹಿತ್ಯದ ಸಂಪರ್ಕವಿಲ್ಲದ ಮಾನವನ ಜೀವನವನ್ನು ಊಹಿಸಲೂ ಅಸಾಧ್ಯ. ಸಾಹಿತ್ಯ ಜೀವನದ ಅಂತರಾತ್ಮ.

ವಿಶ್ವದ ಎಲ್ಲ ಜನಾಂಗದಲ್ಲೂ ಸಾಹಿತ್ಯಕ್ಕೆ ಶ್ರೇಷ್ಠ ಸ್ಥಾನವಿದೆ. ಏಕೆಂದರೆ ಜನಾಂಗ ಜಾಗೃತವಾಗುವುದು. ಜನಾಂಗದ ಸಂಸ್ಕೃತಿಗಳ ಸುಧಾರಿಸುವುದು ಸಾಹಿತ್ಯದಿಂದಲೇ ಸಾಹಿತ್ಯ ಮತ್ತು ಸಂಸ್ಕೃತಿಗಳ ಈ ಅರ್ಥದ ಹಿನ್ನಲೆಯಲ್ಲಿ ನಮ್ಮ ಕನ್ನಡ ಸಾಹಿತ್ಯವನ್ನು ನೋಡಿದಾಗ ನಮಗೆ ಅಭಿಮಾನವೆನಿಸುತ್ತದೆ. ಕನ್ನಡಸಾಹಿತ್ಯ ವಿಶ್ವಜೀವನಕ್ಕೆ ಬೇಕಾದ ಎಷ್ಟೋ ಆದರ್ಶಗಳನ್ನು ನೀಡಿದೆ ಎಂಬುದು ಸತ್ಯವಾದ ಮಾತು.

ಉಳಿದ ಸಾಹಿತ್ಯದಂತೆ ಕನ್ನಡ ಸಾಹಿತ್ಯವೂ 'ಶೃತಿ' ಸಾಹಿತ್ಯದಿಂದಲೇ ಆರಂಭವಾಗಿದೆ. ಅದೇ ಜನಪದ ಸಾಹಿತ್ಯ. ಜನಸಾಮಾನ್ಯರು ತಮ್ಮ ದಿನ ನಿತ್ಯದ ಅನುಭವಗಳನ್ನು ತಮ್ಮ ಆಡು ನುಡಿಯಲ್ಲಿ ಹಾಡಿದುದೇ, ಆಡಿದುದೇ ಜನಪದ ಸಾಹಿತ್ಯ. ಅವರಿಗೆ ನಿಸರ್ಗವೇ ಶಾಲೆ, ಅನುಬವವೇ ಗುರು. ನಾಗರಿಕ ಜಗತ್ತಿನ ಕೃಷಿಯ ಫಲವಾಗಿ ಈ ಆಡುವ ಭಾಷೆ ಬರೆಯುವ ಭಾಷೆಯಾಯಿತು. "ಶೃತಿ" "ಕೃತಿ' ಯಾಯಿತು.

### ಪ್ರಾಚೀನ ಭಾಷೆ

ಇತಿಹಾಸವನ್ನು ಗಮನಿಸಿದರೆ ಕನ್ನಡ ಸಾಹಿತ್ಯಕ್ಕೆ ಸುಮಾರು 1,500 ವರ್ಷಗಳಷ್ಟು ದೀರ್ಘ ಪ್ರಾಚೀನತೆ ಇರುವುದು ತಿಳಿದು ಬರುತ್ತದೆ. ಕ್ರಿ. ಶ. 5ನೆಯ ಶತಮಾನದ ಹಲ್ಮಿಡಿ ಶಾಸನ ಇದಕ್ಕೆ ಸಾಕ್ಷಿ. ಅದಕ್ಕಿಂತಲೂ ಎರಡು – ಮೂರು ಶತಮಾನಗಳಷ್ಟು ಹಿಂದಿನ ಕೆಲವು ಶಾಸನಗಳು ಇರುವುದಾಗಿಯೂ ಕೆಲವರು ಹೇಳುತ್ತಾರೆ. ಭಾಷಾ ಸಂಶೋಧಕರ ಅಭಿಪ್ರಾಯದಂತೆ ಪ್ರಾಚೀನತೆಯ ದೃಷ್ಟಿಯಿಂದ ಭಾರತದಲ್ಲಿ ಸಂಸ್ಕೃತ ಆದಿ ಭಾಷೆಯಾದರೆ, ತಮಿಳು ಎರಡನೆಯ ಸ್ಥಾನವನ್ನೂ ಕನ್ನಡ ಮೂರನೇ ಸ್ಥಾನವನ್ನು ಪಡೆಯುತ್ತವೆ. ಒಟ್ಟಿನಲ್ಲಿ ಕನ್ನಡವು ಪ್ರಾಚೀನ ಭಾಷೆಗಳಲ್ಲಿ ಒಂದೆಂಬುದಂತೂ ಸತ್ಯ.

ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ಗಮನಿಸಿ ಸಾಹಿತ್ಯ ಚರಿತ್ರಕಾರರು ಸಾಮಾನ್ಯವಾಗಿ ನಾಲ್ಕು ಭಾಗಗಳಾಗಿ ವಿಂಗಡಿಸುತ್ತಾರೆ. ಒಂದನೆಯದಾಗಿ ಆರಂಭದ ಯುಗ, ಅಂದರೆ ಕ್ರಿ. ಶ. 12ನೆಯ ಶತಮಾನದ ಮಧ್ಯಭಾಗದವರೆಗಿನ ಕಾಲ. ಇದನ್ನು “ಜೈನಯುಗ” ಎಂದೂ ಕರೆಯುತ್ತಾರೆ. 12ನೆಯ ಶತಮಾನದ ಮಧ್ಯಭಾಗದಿಂದ 15 ನೆಯ ಶತಮಾನದವರೆಗಿನ ಕಾಲ ಮಧ್ಯಯುಗ ಅಥವಾ ವೀರಶೈವ ಯುಗವೆನಿಸಿಕೊಂಡಿದೆ. 15 ನೆಯ ಶತಮಾನದಿಂದ 19 ನೆಯ ಶತಮಾನದವರೆಗಿನ ಅವಧಿ ಹೊಸಯುಗ ಅಥವಾ ಬ್ರಾಹ್ಮಣ ಯುಗ. ಹತ್ತೊಂಬತ್ತನೆಯ ಶತಮಾನದಿಂದ ಈಚಿನದು ಆಧುನಿಕ ಯುಗ. ಇದನ್ನು ಮೇಲಿನ ಎಲ್ಲ ಧರ್ಮ ಸಾಹಿತ್ಯ ಯುಗಗಳ ಸಮನ್ವಯವೆಂದು ಕರೆಯಬಹುದು.

ಆರಂಭ ಯುಗದ ಕನ್ನಡ ಸಾಹಿತ್ಯ ಬಹುತೇಕ ಸಂಸ್ಕೃತ ಭೂಯಿಷ್ಠವಾದ ಪ್ರೌಢ ಸಾಹಿತ್ಯವಾಗಿತ್ತು. ರಾಜಮನ್ನಣೆ, ಪಂಡಿತ ಪ್ರತಿಭೆ ಇವೆರಡೇ ಅಲ್ಲಿ ಮುಖ್ಯವಾಗಿದ್ದವು. ಜನ ಸಾಮಾನ್ಯರಿಗೆ ಸಾಹಿತ್ಯದ ಸೌರಭದ ನೇರ ಆಸ್ವಾದನೆಗೆ ಇದ್ದ ಅವಕಾಶ ಕಡಿಮೆ. ಆದರೂ ಆ ಸಾಹಿತ್ಯ ಅತ್ಯಂತ ಶ್ರೇಷ್ಠವಾಗಿತ್ತು. ಕನ್ನಡದ ಮುಂದಿನ ಬೆಳವಣಿಗೆಗೆ ಭದ್ರವಾದ ಅಡಿಪಾಯ ಹಾಕಿತು.

## ವೈಚಾರಿಕ ಪ್ರಜ್ಞೆಯ ಹೊಸ ವಾತಾವರಣ

ವಾಸ್ತವವಾಗಿ ಕನ್ನಡ ಸಾಹಿತ್ಯಕ್ಕೆ ನವಚೇತನ ಬಂದುದೆಂದರೆ 12ನೆಯ ಶತಮಾನದ ಮಧ್ಯಭಾಗದಲ್ಲಿ; ಶಿವಶರಣರ ಕಾಲದಲ್ಲಿ. ಕಲ್ಯಾಣ ಆ ಚೇತನದ ಕೇಂದ್ರವಾಗಿತ್ತು. ಅಂದು ನಡೆದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿ ಕನ್ನಡ ಸಾಹಿತ್ಯ ಹೊಸ ರೂಪು ತಾಳಲು ಕಾರಣವಾಯಿತು. ಅಂಧಶ್ರದ್ಧೆ, ಅರ್ಥಹೀನ ಸಂಪ್ರದಾಯಗಳ ಸಂಕೋಲೆಯಲ್ಲಿ ಸಿಕ್ಕಿದ ಸಮಾಜ ಜೀವನವನ್ನು ವೈಚಾರಿಕ ಪ್ರಜ್ಞೆಯ ಹೊಸ ವಾತಾವರಣಕ್ಕೆ ಕೊಂಡೊಯ್ದು ಒಂದು ಅದ್ಭುತ ಪ್ರಯೋಗ ನಡೆಯಿತು. ಈ ಪ್ರಯೋಗದ ಪ್ರಮುಖ ನಾಯಕರು ಜಗಜ್ಜ್ಯೋತಿ ಬಸವಣ್ಣನವರು.

ಜನಜೀವನದಲ್ಲಿ ಕತ್ತಲೆ ಕವಿದಿದ್ದ ಕಾಲವದು. ಹಗಲಿನಲ್ಲೇ ಹಾದಿ ತಪ್ಪಿ ನಡೆಯುವಂತಹ ಅಜ್ಞಾನದ ಪರಿಸ್ಥಿತಿ. ಇಂತಹ ಸಂದರ್ಭದಲ್ಲಿ ಶಿವಶರಣರ ಅನುಭವ ಮಂಥನದಿಂದ ಹುಟ್ಟಿದ ವಚನ ಸಾಹಿತ್ಯ ಮಹಾಜ್ಯೋತಿಯಾಗಿ ಜನಕೋಟಿಯನ್ನು ಎತ್ತಿ ಹಿಡಿಯಿತು. ವಚನ ಸಾಹಿತ್ಯ ನಿಜಕ್ಕೂ ಸಾಹಿತ್ಯ ಕ್ಷೇತ್ರದ ಒಂದು ದೊಡ್ಡ ಕ್ರಾಂತಿ. ಕನ್ನಡ ಸಾಹಿತ್ಯ ಸರಸ್ವತಿಯನ್ನು ಛಂದೋಬಂಧಗಳ ಸಂಪ್ರಾದಾಯದಿಂದ ಬಿಡಿಸಿ ಅನುಭಾವದ ಸಂಪತ್ತನ್ನು ಜನ ಸಾಮಾನ್ಯರೂ ನೇರವಾಗಿ ಸವಿಯುವಂತೆ ಮಾಡಿದರು ಶಿವಶರಣರು. ಬಹುಶಃ ಇಪ್ಪತ್ತನೆಯ ಶತಮಾನದ “ನವ್ಯಕಾವ್ಯ”ಗಳಿಗೂ ಶಿವಶರಣರ ವಚನ ಸ್ಫೂರ್ತಿಯೆಂದರೆ ತಪ್ಪಾಗಲಾರದು.

ವಚನ ಸಾಹಿತ್ಯ ಕನ್ನಡವನ್ನೂ ಶ್ರೀಮಂತಗೊಳಿಸಿದ, ಸ್ವತಂತ್ರಗೊಳಿಸಿದ ಒಂದು ವಿಶಿಷ್ಟ ಪ್ರಯೋಗವೆಂದು ಹೇಳಬಹುದು. ಇಲ್ಲಿ ಅಭಿಮಾನದಿಂದ ಹೇಳಿಕೊಳ್ಳಬೇಕಾದುದೆಂದರೆ, ಇಂದು ವಿಶ್ವದಾದ್ಯಂತ ಪ್ರಸಾರದಲ್ಲಿರುವ ಆಂಗ್ಲ ಸಾಹಿತ್ಯದಲ್ಲಿ ಹೊಸ ಪ್ರಯೋಗಗಳು ನಡೆಯುವ ಎರಡು ಮೂರು ಶತಮಾನಗಳ ಮುಂಚೆಯೇ ಕನ್ನಡ ಸಾಹಿತ್ಯದಲ್ಲಿ ಕ್ರಾಂತಿ ನಡೆದುದು. ಈ ದೃಷ್ಟಿಯಿಂದ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನ ಚಿರಸ್ಮರಣೀಯ. ಈ ಸಾಹಿತ್ಯ ಕ್ರಾಂತಿಗೆ ಬಸವಣ್ಣನವರ ಪೂರ್ವದ ಶರಣರು ಮೂಲವಾದರೂ ಅದನ್ನು ಬೃಹತ್ ಪ್ರಮಾಣದಲ್ಲಿ ಬೆಳಗಿಸಿದ ಕೀರ್ತಿ ಬಸವಣ್ಣನವರಿಗೆ ಮತ್ತು ಅವರ ಸಮಕಾಲೀನ ಶರಣರಿಗೆ ಸಲ್ಲುತ್ತದೆ. ಆದುದರಿಂದಲೇ ಅಲ್ಲಿಂದ ಮುಂದಿನ ಮೂರು ಶತಮಾನಗಳ ಅವಧಿಯನ್ನು “ಬಸವಯುಗ” ಎಂದೇ ಕರೆದಿರುವುದು.

## ವೀರಶೈವ ಸಾಹಿತ್ಯದ ದಿಟ್ಟಕ್ರಮ

ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿಯ ಮೂಲಕ ಶಿವಶರಣರು ಕನ್ನಡ ಸಾಹಿತ್ಯ ಮತ್ತು ಕರ್ನಾಟಕ ಸಂಸ್ಕೃತಿಗಳಿಗೆ ಮಾತ್ರವಲ್ಲದೆ ಸಮಗ್ರ ಭಾರತದ ಸಾಹಿತ್ಯ ಹಾಗೂ ಸಂಸ್ಕೃತಿಗಳಿಗೂ ಅಮೂಲ್ಯ ಕಾಣಿಕೆ ನೀಡಿದ್ದಾರೆ ಎಂದು ಹೇಳಬಹುದು. ವೀರಶೈವ



ಸಾಹಿತ್ಯದ ಒಂದು ವಿಶೇಷವೆಂದರೆ ಅದು ವಿಶ್ವಮಾನವತೆಯನ್ನು ಎತ್ತಿ ಹಿಡಿದಿರುವುದು. “ಸಕಲ ಜೀವಾವಳಿಗೆ ಲೇಸ ಬಯಸುವ” ಧರ್ಮ ವೀರಶೈವರದು. “ಜನ ಬದುಕಲೆಂದು” ಕಾವ್ಯ ರಚಿಸಿದವರು ವೀರಶೈವ ಕವಿಗಳು. ಕಾವ್ಯ ವಸ್ತುವಿಕೆ ವ್ಯಕ್ತಿಗಿಂತ ತತ್ವವನ್ನು ಆರಿಸಿಕೊಂಡವರು. ಮಾನವೀಯತೆಯ ಮೌಲ್ಯಗಳನ್ನು ಎತ್ತಿಹಿಡಿಯುವುದು, ಅನ್ಯಾಯವನ್ನು ಖಂಡಿಸುವುದು, ವೀರಶೈವ ಸಾಹಿತ್ಯದ ದಿಟ್ಟಕ್ರಮ. ವೀರಶೈವ ಕವಿಗಳು ದಾಕ್ಷಿಣ್ಯಪರರಲ್ಲ. ಅನ್ಯರ ಮೆಚ್ಚುಗೆಗಿಂತ ಲಿಂಗ ಮೆಚ್ಚುಗೆಗೆ ನಡೆಯುವವರು, ನುಡಿಯುವವರು. ಆತ್ಮ ಪರಿಶೋಧನೆ ಪ್ರತಿಹೆಜ್ಜೆಯ ಸೂತ್ರ, ಜೀವದಯೆ, ಸರ್ವ ಸಮಾನತೆ, ದೈವಭಕ್ತಿ, ಕಾಯಕ ನಿಷ್ಠೆ ಒಂದೊಂದೂ ವೀರಶೈವ ಸಾಹಿತ್ಯದಲ್ಲಿ ನಿರ್ಮಲ ಜ್ಯೋತಿಗಳಾಗಿ ಸಾಧಕರಿಗೆ, ಸಾಮಾನ್ಯ ಜನರಿಗೆ ದಾರಿತೋರಿಸುತ್ತವೆ.

ಹರಿಹರ, ರಾಘವಾಂಕ, ಸೋಮನಾಥ, ಭೀಮಕವಿ, ಚಾಮರಸ, ಮೊಗ್ಗೆಯ ಮಾಯಿದೇವ, ಸಿಂಗಿರಾಜ, ನಿಜಗುಣ ಶಿವಯೋಗಿ, ಷಡಕ್ಷರಿ, ಗುಬ್ಬಿ ಮಲ್ಲಣಾರ್ಯ, ವಿರೂಪಾಕ್ಷ, ಸರ್ವಜ್ಞ, ಷಡಕ್ಷರಿದೇವ, ತೋಂಟದ ಸಿದ್ಧಲಿಂಗೇಶ್ವರ, ಮೊದಲಾದ ಪ್ರಮುಖ ವೀರಶೈವ ಕವಿ-ಸಾಹಿತಿಗಳೇ ಅಲ್ಲದೆ ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದವರೆಗೆ ನೂರಾರು ಜನ ಶಿವಕವಿಗಳ ಹಾಗೂ ಸಾಹಿತಿಗಳ ದೊಡ್ಡ ಪರಂಪರೆಯೇ ನಮಗಿದೆ. ಇವರೆಲ್ಲರೂ ಶಿವಭಕ್ತಿಯನ್ನು ಸಾರಲು ತಮ್ಮ ಕಾವ್ಯಶಕ್ತಿಯನ್ನು ಬಳಸಿದ್ದರೂ ಕನ್ನಡದ ಹಿರಿಮೆಯನ್ನು ಉಳಿಸಿ ಬೆಳೆಸಿದ್ದಾರೆ. ಜನ ಸಾಮಾನ್ಯರ ಮಧ್ಯೆ ಇದ್ದು, ಅವರ ನೋವು ನಲಿವುಗಳಲ್ಲಿ ಪಾಲುಗೊಂಡು ಅದಕ್ಕೆ ಪರಿಹಾರ ರೂಪವಾಗಿ ಸಾಹಿತ್ಯ ಸೃಷ್ಟಿಸಿದ ಮಹನೀಯರು ನಿಜಕ್ಕೂ ವಂದ್ಯರು.

ಇನ್ನು ಶಿವಶರಣರ ವಚನ ಸಾಹಿತ್ಯದ ಸೌಂದರ್ಯದ ಬಗ್ಗೆ ಹೇಳಬೇಕಾದ ಆಗತ್ಯವಿಲ್ಲವಾದರೂ ಅದು ಮಾನವ ಜನಾಂಗದ ಕಲ್ಯಾಣಕ್ಕೆ, ವಿಶ್ವಸಮಾಜ ಜೀವನದ ನೆಮ್ಮದಿಗೆ ಎಂತಹ ಆದರ್ಶಗಳನ್ನು ನೀಡಿದೆ ಎಂಬುದನ್ನು ಒಂದೆರಡು ಮಾತುಗಳಲ್ಲಿ ಇಲ್ಲಿ ಪ್ರಸ್ತಾಪಿಸುವುದು ಸೂಕ್ತವೆಂದು ನಾನು ಭಾವಿಸಿದ್ದೇನೆ.

## ಮಧುರ ಬಾಂಧವ್ಯದ ಮಹಾ ಉದಾಹರಣೆ

ವಚನಕಾರರು ಮೊಟ್ಟ ಮೊದಲು ಬೋಧಿಸಿದುದು ಏಕೇಶ್ವರವಾದ. ಹಲವು ದೇವರುಗಳನ್ನು ಕಲ್ಪಿಸಿಕೊಂಡು ಒಬ್ಬೊಬ್ಬರು ಒಂದೊಂದು ದೇವರ ಭಕ್ತರಾಗಿ, ತಮ್ಮ ತಮ್ಮ ದೇವರ ಹಿರಿಮೆ ಸಾರುವುದರಲ್ಲಿ ಪರಸ್ಪರ ಹೋರಾಡುವುದನ್ನು ವಚನಕಾರರು ಒಪ್ಪುವುದಿಲ್ಲ. ಕಲ್ಪಿತ ದೇವರುಗಳಿಗೆ ಬದಲಾಗಿಬ್ರಹ್ಮಾಂಡ ಸ್ವರೂಪವಾದ, ವಿಶ್ವಸಂಕೇತವಾದಇಷ್ಟ ಲಿಂಗದ ಆರಾಧನೆಯನ್ನು ಅವರು ಹೇಳುತ್ತಾರೆ. “ನಂಬಿದ ಭಕ್ತಂಗೆ ದೇವನೊಬ್ಬ ಕಾಣಿರೋ” ಎಂಬ ಉದಾತ್ತತತ್ವ ಅವರದು.

“ದೇವರು ಒಬ್ಬನೇ” ಎಂದು ಹೇಳುವ ಶರಣರು ಆ ದೇವರ “ಭಕ್ತರೆಲ್ಲ ಒಂದೇ” ಎಂದು ಸಾರಿದ್ದಾರೆ; ಜಾತಿ-ಮತ, ಪಂಥ-ಪಂಗಡಗಳ ಬೇರನ್ನೇ ಕಿತ್ತು ಹಾಕಿದ್ದಾರೆ. ಸಿರಿಯಾಳನನ್ನು ಸೆಟ್ಟಿ ಎನ್ನಲಿಲ್ಲ. ಮಾಚಯ್ಯನನ್ನು ಮಡಿವಾಳ ಎನ್ನಲಿಲ್ಲ. ಕಕ್ಕಯ್ಯನನ್ನು ಡೋಹರ ಎಂದು ಕರೆಯಲಿಲ್ಲ. ಚನ್ನಯ್ಯನನ್ನು ಮಾದಾರ ಎಂದು ಹೆಸರಿಡಲಿಲ್ಲ. ಅವರೆಲ್ಲ “ಶಿವಶರಣರು” ಎಂದು ಒಂದೇ ಹೆಸರಿನಲ್ಲಿ ಸಂಬೋಧಿಸಿದರು. ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ ಎನ್ನುವ ಪರಮ ಸೌಜನ್ಯ ಶರಣರ ಜೀವನ. ಹಿರಿತನ-ಕಿರಿತನಗಳು ಜಾತಿಯಿಂದ ಅಥವಾ ಹುಟ್ಟಿನಿಂದ ಬರುವುದಿಲ್ಲ, ನಮ್ಮ ಆಚಾರ-ವಿಚಾರಗಳಿಂದ ಬರುತ್ತವೆ. ಆದುದರಿಂದ ನಡೆ-ನುಡಿ ಶುದ್ಧಿಗೆ ಶರಣರು ಆದ್ಯ ಗಮನಕೊಟ್ಟರು. ನುಡಿದಂತೆ ನಡೆದರು. ಜಾತ್ಯತೀತ ರಾಷ್ಟ್ರವೆಂದು ಹೇಳಿಕೊಳ್ಳುತ್ತಿರುವ ನಮ್ಮ ಇಂದಿನ ಸಮಾಜದಲ್ಲಿ ಇನ್ನೂ ಜಾತೀಯ ಹೆಸರಿನಲ್ಲಿ ರಾಕ್ಷಸೀ ಕೃತ್ಯಗಳು ನಡೆಯುತ್ತಿರುವುದು ನಿಜಕ್ಕೂ ವಿಷಾದದ ಸಂಗತಿ. ನಮ್ಮ ಜನನಾಯಕರು, ಶಿವಶರಣರು ಕಾರ್ಯತಃ ಆಚರಿಸಿದ ಜಾತ್ಯತೀತ ವ್ಯವಸ್ಥೆಯನ್ನು ಗಮನದಲ್ಲಿಟ್ಟುಕೊಂಡು ಜಾತೀಯತೆಯ ವಿಷದ ಕಳೆ ಹಬ್ಬದಂತೆ ನೋಡಿಕೊಳ್ಳಬೇಕು. ಇನ್ನೂ ಸಂಪ್ರದಾಯದ ಭದ್ರ ಹಿಡಿತದಲ್ಲೇ ಇದ್ದಂತಹ ಹನ್ನೆರಡನೆಯ ಶತಮಾನದಲ್ಲಿ “ಅಂತ್ಯಜ”ನೆಂದು ಕರೆಯಲ್ಪಟ್ಟಿದ್ದ ಹರಳಯ್ಯನ ಮಗನಿಗೆ ಕುಲಜನೆಂದು ಕರೆಯಲ್ಪಟ್ಟ ಮಧುವರಸನ ಮಗಳನ್ನು ಕೊಟ್ಟು ವಿವಾಹ

ಮಾಡಿದ ಆದರ್ಶ ಬಹುಶಃ ಜಗತ್ತಿನ ಇತಿಹಾಸದಲ್ಲೇ ಅದ್ವಿತೀಯವಾದುದು. ಈ ಉದಾಹರಣೆ ವಿಶ್ವ ಮಾನವ ಸಮಾಜದ ಮಧುರ ಬಾಂಧವ್ಯಕ್ಕೆ ಎಷ್ಟೊಂದು ಮಾರ್ಗದರ್ಶಕವಾಗಿದೆ ಎಂಬುದನ್ನು ನಾವು ನೋಡಬೇಕು.

ಶರಣರು ಇಂತಹ ಆಚರಣೆಯನ್ನು ನಡೆದು ತೋರಿ ಅದರಂತೆ ನುಡಿದರು. ಆದುದರಿಂದಲೇ ಅವರ ವಚನಗಳಿಗೆ ಮಂತ್ರಶಕ್ತಿ ಇದೆ. ಅದು ಅನುಭವದ ನವನೀತ.

## ನಿತ್ಯ ನೂತನ ತಾರಕ ಮಂತ್ರ

ಸ್ತ್ರೀ ಸ್ವಾತಂತ್ರ್ಯಕ್ಕೆ ವಚನಕಾರರು ಕೊಟ್ಟ ಮಹತ್ವ ಇಪ್ಪತ್ತನೆಯ ಶತಮಾನದ ನಾಗರಿಕ ಜಗತ್ತಿಗೆ ಮೇಲ್ಪಂಕ್ತಿ. ಅನುಭವ ಮಂಟಪದಲ್ಲಿ ಮಹಿಳೆಯರಿಗೂ ಸಮಾನ ಸ್ಥಾನ ಕೊಟ್ಟು ಗೌರವಿಸಿದ ಕೀರ್ತಿ ಅಸಮಾನ್ಯವಾದುದು. ಪ್ರಭುದೇವ, ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮಣ್ಣ, ಚನ್ನಯ್ಯ, ಕಕ್ಕಯ್ಯ, ಕಿನ್ನರಿ ಬೊಮ್ಮಯ್ಯ, ಆಯ್ದಕ್ಕಿ ಮಾರಯ್ಯ, ಕೋಲು ಶಾಂತಯ್ಯ, ಹಡಪದಪ್ಪಣ್ಣ ಮೊದಲಾದ ನಾನಾ ಶಿವಶರಣರ ಜೊತೆಯಲ್ಲೇ ಅಕ್ಕಮಹಾದೇವಿ, ಕದಿರೆ ರೆಮ್ಮವ್ವೆ, ನೀಲಲೋಚನೆ ಲಿಂಗಮ್ಮ, ಲಕ್ಕಮ್ಮ, ಸತ್ಯಕ್ಕ ಮೊದಲಾದ ಶರಣೆಯರೂ ಸರಿಸಮಾನವಾಗಿ ಕುಳಿತು ಅನುಭವ ಗೋಷ್ಠಿಯಲ್ಲಿ ಪಾಲುಗೊಂಡರು. ಈ ಸ್ವಾತಂತ್ರ್ಯದಿಂದಾಗಿ ಶರಣೆಯರೂ ಸಹ ಅಮೂಲ್ಯವಾದ ವಚನ ಸಾಹಿತ್ಯವನ್ನು ಸೃಷ್ಟಿಸಲು ಅವಕಾಶವಾಯಿತು.

ಇನ್ನು "ಕಾಯಕದ' ಬಗ್ಗೆ ಶಿವಶರಣರು ಕೊಟ್ಟಿರುವ ಮಹತ್ವವಂತೂ ಅನುಪಮವಾದುದು. ಬಹುಶಃ ಆಧುನಿಕ ಜಗತ್ತಿನಲ್ಲಿ ಎಲ್ಲ ರಾಜಕೀಯ ಪದ್ಧತಿಗೂ ಪರಮಸೂತ್ರವೆನಿಸಬಹುದಾದ ಏಕ ಮಾತ್ರ ತತ್ವ ಶಿವಶರಣರ ಕಾಯಕ ತತ್ವ. "ಗುರುವಾದಡೆಯೂ ಕಾಯಕ ಮಾಡಬೇಕು." ಎನ್ನುವ ಶರಣರು ದುಡಿಮೆಯ ಗೌರವವನ್ನು ಎತ್ತಿ ಹಿಡಿದಿದ್ದಾರೆ. ಕಾಯಕ ಮಾಡಿದಲ್ಲದೆ ಪ್ರಸಾದಕ್ಕೆ ಹಕ್ಕಿಲ್ಲ ಎನ್ನುವ ಕಟ್ಟಳೆಯ ಶರಣರ ನೀತಿಯನ್ನು ನಾವು ಇಂದು ಅಕ್ಷರಶಃ ಆಚರಿಸಬಲ್ಲೆವಾದರೆ ನಮ್ಮ ಎಲ್ಲ ಸಾಮಾಜಿಕ ಭೇದಭಾವಗಳ ಅನಿಷ್ಟಗಳು, ಆರ್ಥಿಕ ಅಸಮಾನತೆಯ ಆಘಾತಗಳು ನಿರ್ಮೂಲವಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

ಹೀಗೆ ಏಕೇಶ್ವರವಾದ, ಮಾನವ ಸಮಾನತೆ ಜಾತ್ಯತೀತತೆ, ಸ್ತ್ರೀಸ್ವಾತಂತ್ರ್ಯ, ಕಾಯಕ ಶ್ರೇಷ್ಠತೆ, ಮೊದಲಾದ ವೈಯಕ್ತಿಕ ಹಾಗೂ ಸಾಮಾಜಿಕ ಶೀಲಗಳನ್ನು ಉದಾತ್ತಗೊಳಿಸುವ ಅಮೃತ ಸಂದೇಶವನ್ನು ನೀಡಿದ ಶಿವಶರಣರ ವಚನ ಸಾಹಿತ್ಯ ನಿಜಕ್ಕೂ ನಿತ್ಯ ನೂತನವಾದುದು. ಇಂದಿನ ಪರಿಸ್ಥಿತಿಯಲ್ಲಂತೂ ಅದು ತಾರಕ ಮಂತ್ರವಾಗಬಲ್ಲದು.

ಯಾವ ಸಮಾಜ ವರ್ಣಾಶ್ರಮ ಧರ್ಮದ ವಿರುದ್ಧ ಸಿಡಿದೆದ್ದು ವೈಚಾರಿಕ ಧರ್ಮವನ್ನು ಹಿಡಿದು ಮೇಲೆತ್ತಿತೋ, ಅದನ್ನು ಅವಲಂಬಿಸಿತೋ, ಅಂತಹ ಸಮಾಜ ಇತ್ತೀಚೆಗೆ ಮತ್ತೆ ಆ ವರ್ಣಾಶ್ರಮದ ಸಾಂಪ್ರದಾಯಿಕ ಹಿಡಿತಕ್ಕೆ ಸಿಕ್ಕಿಕೊಳ್ಳುತ್ತಿರುವುದು ದುರಾದೃಷ್ಟಕರ. ಕಾಲದ ಪ್ರಜ್ಞೆ ಅತ್ಯಂತ ಮುಖ್ಯವಾದುದು. ಮಾನವ ಸಮಾಜ ಹೊಸ ದಿಗಂತವನ್ನು ನೋಡುತ್ತಿದೆ. ಕುರುಡು ನಂಬಿಕೆಗೆ ಇದು ಕಾಲವಲ್ಲ. ಪಟ್ಟಭದ್ರ ಹಿತಗಳಿಗೆ ಇನ್ನು ಅವಕಾಶವಿಲ್ಲ. ಸಂಪ್ರದಾಯದ ಹೆಸರಿನಲ್ಲಿ ಶಾಸ್ತ್ರ ದ ಹೆಸರಿನಲ್ಲಿ ಜನಾಂಗದ ಯಾವುದೇ ವರ್ಗದ ಶೋಷಣೆನಾಗರಿಕ ಜಗತ್ತಿಗೆ ಸಲ್ಲದು. ಇದನ್ನು ವೀರಶೈವ ಸಮಾಜ ಹಿಂದೆ ಮನ್ನಿಸಿದೆ. ಅದರಂತೆ ಆಚರಿಸಿದೆ. ಈ ಮಧ್ಯೆ ಒದಗಿರುವ ಗ್ಲಾನಿ ಈಗ ತೊಲಗಬೇಕು. ವೀರಶೈವರು ಚೊಕ್ಕ ಬಂಗಾರವಾಗಿ ಮೇಲೆದ್ದು ನವ ಸಮಾಜದ ಅವಿಭಾಜ್ಯ ಅಂಗವಾಗಿ, ಎಲ್ಲರಿಗೂ ಆದರ್ಶವಾದ ಬಾಳನ್ನು ತೋರಿಸುವಂತಾಗಲಿ.

ವೀರಶೈವ ಎಂದಿಗೂ ಜಾತಿಯಲ್ಲ; ಅದೊಂದು ಧರ್ಮ; ದರ್ಶನ, ಜಾತೀಯ ಸೋಂಕು ಅದಕ್ಕೆ ಹತ್ತಬಾರದು. ಹತ್ತಲು ವೀರಶೈವರು ಅವಕಾಶ ಕೊಡಬಾರದು. ಪ್ರಭುದೇವರು ಮತ್ತು ಬಸವಣ್ಣನವರ ಆದರ್ಶವನ್ನು ಮೈಗೂಡಿಸಿಕೊಂಡು ಹನ್ನೆರಡನೆಯ ಶತಮಾನದ ಆ ಧರ್ಮ ಜಾಗೃತಿಯನ್ನು ಮತ್ತೆ ಜೀವಂತಗೊಳಿಸಬೇಕೆಂದು ಈ ಸಂದರ್ಭದಲ್ಲಿ ಮನವಿಮಾಡಿಕೊಳ್ಳುತ್ತೇನೆ.





ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿಗಳು ಕನ್ನಡ ಸಾಹಿತ್ಯ ಸಂಸ್ಕೃತಿಗಳು ಕನ್ನಡ ಸಾಹಿತ್ಯ ಸಂಸ್ಕೃತಿಗಳಿಂದ ಬೇರೆಯಾದುದಲ್ಲ. ದಿವಂಗತ ಅ. ನ. ಕೃಷ್ಣರಾಯರು ವೀರಶೈವ ಸಾಹಿತ್ಯ ಸಂಸ್ಕೃತಿಯೆಂದರೆ ಕನ್ನಡ ಸಾಹಿತ್ಯ ಸಂಸ್ಕೃತಿಯೇ ಎಂದು ಹೇಳಿದ್ದಾರೆ. ಇದನ್ನು ಗಮನದಲ್ಲಿಟ್ಟುಕೊಂಡು ಈ ಶತಮಾನದ ನಮ್ಮ ಅನೇಕ ವೀರಶೈವ ಕವಿಗಳು, ಸಾಹಿತಿಗಳು ಅಮೂಲ್ಯ ಕೆಲಸ ಮಾಡಿದ್ದಾರೆ ; ಮಾಡುತ್ತಿದ್ದಾರೆ. ಅವರ ಸೇವೆಗೆ ನಾಡು ಋಣಿಯಾಗಿದೆ. ಇನ್ನು ಮುಂದೆಯೂ, ವೀರಶೈವ ಸಾಹಿತಿಗಳಿಂದ ಕನ್ನಡ ಸಾಹಿತ್ಯ ಸಂಸ್ಕೃತಿಗಳಿಗೆ ಆ ಮೂಲಕ ವಿಶ್ವಮಾನವ ಸಮಾಜಕ್ಕೆ ವಿಶಿಷ್ಟವಾದ ಜೀವನ ಸಂಸ್ಕೃತಿಗಳಿಗೆ, ಆ ಮೂಲಕ ವಿಶ್ವಮಾನವ ಸಮಾಜಕ್ಕೆ ವಿಶಿಷ್ಟವಾದ ಜೀವನ ಸಂದೇಶವನ್ನು ನೀಡುವಂತಹ ಸಾಹಿತ್ಯ ಹೆಚ್ಚು ಹೆಚ್ಚಾಗಿ ರೂಪುಗೊಳ್ಳಲೆಂದು ಹಾರೈಸುತ್ತೇನೆ.

ಕನ್ನಡನಾಡಿನ ಐಕ್ಯತೆಗೆ, ಸಮೃದ್ಧಿ ಸೌಹಾರ್ದತೆಗೆ, ಭಾರತದ ಸಮಗ್ರತೆಗೆ ವೀರಶೈವ ಸಮಾಜ ತನ್ನದೇ ಆದ ಕಾಣಿಕೆಯನ್ನು ನೀಡಿದೆ. ಈ ದಿಸೆಯಲ್ಲಿ ವೀರಶೈವ ಸಾಹಿತ್ಯ-ಸಂಸ್ಕೃತಿಯ ಕಾರ್ಯಚಟುವಟಿಕೆಗಳು ವಿಸ್ತಾರಗೊಂಡುಇನ್ನೂ ಸಮಸ್ತ ಮಾನವ ಕಲ್ಯಾಣಕ್ಕಾಗಿ ಸೇವೆ ಸಲ್ಲುವಂತಾಗಲಿ. ಭಾಷೆ, ಜಾತಿ, ಪ್ರಾಂತ್ಯ ಮೊದಲಾದವುಗಳ ಎಲ್ಲೆಯನ್ನು ದಾಟಿ ವಿಶ್ವವಿಶಾಲ ಭಾವನೆಯನ್ನು ಜನತೆಯಲ್ಲಿ ಮೂಡಿಸುವುದು ನಮ್ಮೆಲ್ಲರ ಕರ್ತವ್ಯ. ಈ ಕರ್ತವ ನಿರ್ವಹಣೆಗೆ ನಾಡಿನ ಸಾಹಿತ್ಯ–ಸಂಸ್ಕೃತಿಗಳೂ ಜೊತೆಯಲ್ಲೇ ಬೆಳೆಯಬೇಕಾಗುತ್ತದೆ. ಅಂತಹ ಸಾಹಿತ್ಯ ಸಂಸ್ಕೃತಿಗಳನ್ನು ಬೆಳಸಿ ನಮ್ಮ ಬದುಕನ್ನು ಸಾರ್ಥಕ ಮಾಡಿಕೊಳ್ಳೋಣ. —

### ಈ ತಿಂಗಳ ವಿಶೇಷ

| | |
|---|---|
| 3–12–1885 | ಗಾಂಧಿಜೀಯ ಸಾಬರ್ಮತಿ ಆಶ್ರಮದ. ಜ್ಯೋತಿಯೆಂದೆನಿಸಿದ ಬಹುಭಾಷಾವಿಚಾರದರಾದ ಆಚಾರ್ಯ ದತ್ತಾತ್ರೇಯ ಬಾಲಕೃಷ್ಣ (ಶಾಶಾ) ಶಾಲೇಲಕರವ ಜನನ. |
| 4–12–1959 | ಅಮೇರಿಕದ ಲಿಟ್ಲಜೋರೊಕೆಟ್ಟಿನಲ್ಲಿ ಮಂಗನ ಅಂತರಿಕ್ಷ ಯಾತ್ರೆ. |
| 10-12-1959 | ನವದೆಹಲಿಗೆ ಐನ್‌ಸ್ ಹೋವನರ ಆಗಮನ. |
| 11-12-1949 | ಉದೇಪುರದ ವಿಭಾಗದ ಕಾಲಗಮನ ಗಣಿಗಳಿಂದ ತೆಗೆದ ಪಚ್ಚೆಕಲ್ಲುಗಳ ಪ್ರದರ್ಶನವು ಜಯಪುರದಲ್ಲಿ ಜರುಗಿತು. ಲಾಭದಾಯಕವಾದ ಗಣಿಗಳು ಕೇವಲ ರಾಜಸ್ಥಾನದಲ್ಲಿ ಮಾತ್ರ ಇವೆ. |
| 12-12-1912 | ಡಿಲ್ಲಿ ದರ್ಬಾರು, |
| 12-12-1901 | ಮಾರ್ಕೋನಿಯು ನಿಸ್ತಂತು ವಾಣಿಯಲ್ಲಿ ಅಮೇರಿಕೆಯಿಂದ ಮೊದಲ ಸಲ ಮಾತಾಡಿದ್ದು. |
| 12-12-1936 | ಬ್ರಿಟಿಷ್ ದೊರೆಯಾದ ಎಂಟನೇ ಎಡ್ವರ್ಡ್ (ಡೇವಿಡ್) ಸಿಂಪ್ಸನಳಿಗಾಗಿ ಸಿಂಹಾಸವನ್ನು ತೊರೆದು ಮಾತೃ ಭೂಮಿಯಿಂದ ಹೊರಟಿದ್ದು. |
| 15-12-1850 | ವಲ್ಲಭಭಾಯಿ ಪಟೇಲರ ಮರಣ |
| 17-12-1961 | ಭಾರತ ಸೈನ್ಯವು ಗೋವೆಯೊಳಗೆ ಪ್ರವೇಶಿಸಿದ್ದು. |
| 17-12-1903 | ವಿಮಾನದ ಪಿತಾಮಹರಾದ ರೈಟ್ ಬಂಧುಗಳ ಮೊದಲನೆಯ ಹಾರಾಟ. |
| 18-12-1824 | ಕಿತ್ತೂರಿನ ಪತನವಾದುದ್ದು. |
| 19-12-1903 | ಕನ್ನಡ ಕೋಶದ ಜನಕನಾದ ಕಿಟ್ಟೆಲ್ಲರ ನಿಧನ. |
| 20-12-1904 | ಕನ್ನಡ ಹಿರಿಯ ಕವಿ ಕೆ. ವಿ. ಪುಟ್ಟಪ್ಪನವರ ಜನನ. |
| 22-12-1921 | ಶಾಂತಿನಿಕೇತನವು 'ವಿಶ್ವಭಾರತಿ' ವಿಶ್ವವಿದ್ಯಾಲಯವಾಗಿ ಪರಿವರ್ತನೆಯಾದದ್ದು. |
| 23-12-1929 | ಆದರ್ಶ ಸನ್ಯಾಸಿ ಸ್ವಾಮಿ ಶ್ರದ್ಧಾನಂದಜೀಯವರ ನಿಧನ. |
| 26-12-1861 | ಪಂ. ಮದನ.ಮೋಹನ ಮಾಲವೀಯರ ಜನನ. |
| 27-12-1895 | ನೊಬೆಲನ ಮರಣ ಶಾಸನ |
| 31-12-1932 | ಆಕಾಶವಾಣಿ ಮೊದಲನೆಯ ಸಲ ಬಿಗ್‌ಬೆನ್ ಗಂಟೆ ಹೊಡೆಯುವುದನ್ನು ಜಗತ್ತಿಗೆ ಬಿತ್ತರಿಸಿತು. |

# ಸಂಸ್ಕೃತ ಸಾಹಿತ್ಯಕ್ಕೆ ಕನ್ನಡ ಕವಿಗಳ ಕೊಡುಗೆ

—ಪ್ರೊ॥ ಎಂ. ಶಿವಕುಮಾರಸ್ವಾಮಿ

ಅತ್ಯಂತ ಪ್ರಾಚೀನ ಹಾಗೂ ಉಜ್ವಲ ಪರಂಪರೆಯನ್ನು ಪಡೆದ ಮತ್ತು ಇತ್ತೀಚಿನ ಕಾಲದವರೆಗೂ ಬೆಳೆದು ಬಂದಿರುವ ಸಂಸ್ಕೃತ ಸಾಹಿತ್ಯಕ್ಕೆ ಭಾರತದ ವಿವಿಧ ಪ್ರದೇಶಗಳ ಕವಿಗಳು ತಮ್ಮ ಕಾಣಿಕೆಯನ್ನಿತ್ತಿದ್ದಾರೆ. ಒಂದೊಂದು ಪ್ರಾಂತದ ಕೊಡುಗೆಯು ವಿಶಿಷ್ಟವಾಗಿದೆ. ಕರ್ನಾಟಕವು ಈ ವಿಷಯದಲ್ಲಿ ಯಾವ ರೀತಿಯಲ್ಲಿಯೂ ಹಿಂದೆ ಬಿದ್ದಿಲ್ಲ. ಸಂಸ್ಕೃತದಲ್ಲಿನ ಸಾಹಿತ್ಯ ಮತ್ತು ಶಾಸ್ತ್ರಗಳಿಗೆ ಕನ್ನಡಿಗರ ದೇಣಿಗೆ ವಿಪುಲವಾಗಿದೆ. ವೈದಿಕ ಗ್ರಂಥಗಳ ಅಭ್ಯಾಸಕ್ಕೆ ಅಮೂಲ್ಯ ಸಾಧನವಾದ ಸಾಯಣಭಾಷ್ಯವು ಕರ್ನಾಟಕದ ಕೊಡುಗೆಯೆಂಬುದನ್ನು ಯಾರು ಮರೆಯುವುದು ಸಾಧ್ಯ. ? ವೇದಾಂತದರ್ಶನಕ್ಕೆ ಮಧ್ವ, ವಿದ್ಯಾರಣ ವ್ಯಾಸರಾಜ, ರಾಘವೇಂದ್ರಸ್ವಾಮಿ, ಇತ್ಯಾದಿ ಮಹಾನುಭಾವರ ಕೊಡುಗೆಯ ವೈಶಿಷ್ಟ್ಯವನ್ನು ಯಾರು ಕೃತಜ್ಞತೆಯಿಂದ ಸ್ಮರಿಸುವುದಿಲ್ಲ. ? ಪ್ರಕೃತದಲ್ಲಿ ಸಂಸ್ಕೃತ ಸಾಹಿತ್ಯಕ್ಕೆ ಕನ್ನಡ ಕವಿಗಳ ಕೊಡುಗೆಯನ್ನು ಪರಿಶೀಲಿಸುವ ಪ್ರಯತ್ನ ಮಾಡುತ್ತೇನೆ.

ಕರ್ನಾಟಕದಲ್ಲಿ ಸಂಸ್ಕೃತ ಸಾಹಿತ್ಯ ರಚನೆ ಎಂದಿನಿಂದ ಆರಂಭವಾಯಿತು ಎಂದು ಹೇಳುವುದು ಕಷ್ಟವಾದರೂ, ಸ್ಥೂಲವಾಗಿ ಕ್ರಿಸ್ತಶಕೆಯ ಆರಂಭದ ಕಾಲಕ್ಕೆ ಆಗಲೇ ರೂಢಮೂಲವಾಗಿತ್ತು ಎಂದು ಭಾವಿಸಲು ಕಾರಣಗಳಿವೆ. ಕ್ರಿ. ಶ. 5ನೆಯ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ಕದಂಬರ ಶಾಸನಗಳಲ್ಲಿ ಉತ್ತಮವಾದ ಸಂಸ್ಕೃತ ಕಾವ್ಯ ಶೈಲಿಯನ್ನು ಬಳಸಲಾಗಿತ್ತು. ಇದಕ್ಕೂ ಪೂರ್ವದಲ್ಲಿ ಸಂಸ್ಕೃತ ಸಾಹಿತ್ಯದ ಅನೇಕ ಕೃತಿಗಳ ವಸ್ತುವಿಗೆ ಆಕರವಾಗಿದ್ದ ಗುಣಾಢ್ಯನ 'ಬೃಹತ್ಕಥೆ'ಯು ಕ್ರಿ. ಶ. 1ನೇಯ ಶತಮಾನದಲ್ಲಿ ಪೈಶಾಚಿ ಭಾಷೆಯಲ್ಲಿ ರಚಿತವಾಗಿತ್ತು. ಗುಣಾಢ್ಯನು ಕುಂತಲಾಧಿಪತಿಯಾಗಿದ್ದ ಸಾತವಾಹನನ ಆಸ್ಥಾನದಲ್ಲಿದ್ದನು. ಕುಂತಲ ಎಂಬುದು ಉತ್ತರ ಕರ್ನಾಟಕದ ಭಾಗಗಳಿಗೆ ಇದ್ದ ಪ್ರಾಚೀನ ಹೆಸರು. ಸಾತವಾಹನನ ಆಸ್ಥಾನದಲ್ಲಿಯೇ ಮುಂದಿನ ಸಂಸ್ಕೃತದ ಶೃಂಗಾರ-ಶ್ಲೋಕಗಳಿಗೆ ಸ್ಫೂರ್ತಿಮೂಲವಾದ "ಗಾಥಾಸತ್ತಸಈ" ಎಂಬ ಪ್ರಾಕೃತ ಪದ್ಯ-ಸಂಗ್ರಹವೂ ಸಿದ್ಧವಾಯಿತು. ಬೃಹತ್ಕಥೆ ಮತ್ತು ಗಾಥಾಸಪ್ತಶತಿಗಳವೈಶಿಷ್ಟ್ಯವನ್ನು ಬಾಣನು ತನ್ನ 'ಹರ್ಷಚರಿತೆ'ಯಲ್ಲಿ ಚನ್ನಾಗಿ ನಿರೂಪಿಸಿದ್ದಾನೆ. ಬೃಹತ್ಕಥೆಯು ರಸಾನುಭವ ಮತ್ತು ವಿಸ್ಮಯಕಾರಕ ವರ್ಣನೆಗಳ ಆಗರ—

ಸಮುದ್ದೀಪಿತ ಕಂದರ್ಪಾ ಕೃತಗೌರೀಪ್ರ ಸಾಧನಾ ।
ಹರಲೀಲೇವ ನೋ ಕಸ್ಯ ವಿಸ್ಮಯಾಯ ಬೃಹತ್ಕಥಾ ॥

"ಶೃಂಗಾರ ರಸದ ಅನುಭವವನ್ನು ಮಾಡಿಸುವ, ಗೌರಿಯ ಆರಾಧನೆಯನ್ನು ವರ್ಣಿಸುವ ಬೃಹತ್ಕಥೆಯು, ಕಾಮನನ್ನು ಸುಟ್ಟು ಗೌರಿಯನ್ನು ಒಲಿಸಿಕೊಳ್ಳಲು ಯತ್ನಿಸುವ ಶಿವನ ಲೀಲೆಯಂತೆ, ಯಾರಿಗೆ ಆಶ್ಚರ್ಯವನ್ನು ಉಂಟು ಮಾಡುವುದಿಲ್ಲ ?"

ಇನ್ನು ಗಾಥಾಸಪ್ತಶತಿಯು ಸುಭಾಷಿತ ರತ್ನಗಳ ನಿಧಿ—

ಅವಿನಾಶಿನ ಮಗ್ರಾಮ್ಯಂ ಅಕರೋತ್ ಸಾತವಾಹನಃ ।
ವಿಶುದ್ಧ-ಜಾತಿಭಿಃ ಕೋಶಂ ರ್‍ನೈರಿವ ಸುಭಾಷಿತೈಃ ॥

"ನಾಶವಿಲ್ಲದ, ಒರಟಲ್ಲದ, ಶುದ್ಧಜಾತಿಯ ರತ್ನಗಳ ಭಂಡಾರವನ್ನು ಸಂಗ್ರಹಿಸಿದಂತೆ, ಸಾತವಾಹನನ್ನು ನಿತ್ಯನೂತನವಾದ, ಅಗ್ರಾಮ್ಯವಾದ, ಸ್ವೈಭಾವೋಕ್ತಿ ರೂಪದಲ್ಲಿರುವ ಸುಭಾಷಿತಗಳ ಕೋಶವನ್ನು ರಚಿಸಿದನು.'

ಹೀಗೆ ಕರ್ನಾಟಕದಲ್ಲಿ ಸಂಸ್ಕೃತ-ಸಾಹಿತ್ಯ ರಚನೆಗೆ ಅಸ್ತಿಭಾರವು ನಿರ್ಮಿತವಾಯಿತು. ಕದಂಬರು, ಪಲ್ಲವರು, ಗಂಗರು, ಚಾಲುಕ್ಯರು ವಿಜಯನಗರದ ರಾಜರು, ಮೈಸೂರು ಅರಸರು ಮತ್ತು ನಾಯಕರು ಸಂಸ್ಕೃತ ಸಾಹಿತ್ಯದ ಬೆಳವಣಿಗೆಯನ್ನು ಪ್ರೋತ್ಸಾಹಿಸಿದರು. ಅವರಲ್ಲಿ ಕೆಲವು ರಾಜರು ಸ್ವತಃ ಸಂಸ್ಕೃತ ಕವಿಗಳಾಗಿದ್ದರು. ಅವರ ಆಶ್ರಯದಲ್ಲಿ ಅನೇಕ ಕವಿಗಳು ಸಂಸ್ಕೃತ ಸಾಹಿತ್ಯದ ವಿವಿಧ ಪ್ರಕಾರಗಳಾದ ಮಹಾಕಾವ್ಯ, ಲಘುಕಾವ್ಯ, ನಾಟಕ, ಚಂಪೂ ಮುಂತಾದವುಗಳಿಗೆ ತಮ್ಮ ಕೊಡುಗೆಯನ್ನಿತ್ತರು.

ನಮಗೆ ಗೊತ್ತಿರುವಂತೆ ಸಂಸ್ಕೃತದಲ್ಲಿ ಬರೆದ ಮೊಟ್ಟಮೊದಲ ಕನ್ನಡ ಕವಿಯು ಶಾಸನ ಕವಿಯಾದ ಕುಬ್ಜ. ಇವನು ಕ್ರಿ. ಶ. 5ನೆಯ ಶತಮಾನಕ್ಕೆ ಸೇರಿದ ಕದಂಬರಾಜ ಶಾಂತಿವರ್ಮನ ತಾಳಗುಂದ ಶಾಸನದ ಕರ್ತೃ. ಅವನು ವಿವಿಧ ಛಂದೋಪ್ರಕಾರಗಳನ್ನೂ ಮನೋಹರವಾದ ಶಬ್ದಾರ್ಥಾಲಂಕಾರಗಳನ್ನೂ ಬಳಸುವುದರಲ್ಲಿ ನಿಷ್ಣಾತನು. ದಂಡಿಗಿಂತ ಪೂರ್ವದಲ್ಲಿದ್ದ ಶ್ರೀವರ್ಧದೇವನೆಂಬ ಜೈನ ಕನ್ನಡ ಕವಿಯು 'ಚೂಡಾಮಣಿ' ಎಂಬ ಕಾವ್ಯವನ್ನು ರಚಿಸಿದನೆಂದು ಶ್ರವಣಬೆಳಗೊಳದ ಕ್ರಿ. ಶ. 1129 ರ ಶಾಸನದಿಂದ ತಿಳಿದು ಬರುತ್ತದೆ. ದಂಡಿಯು ಶ್ರೀ ವರ್ಧದೇವನನು ಕವಿತಾ ಶಕ್ತಿಯ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾನೆ. —

ಜಹ್ನೋಃ ಕನ್ಯಾಂ ಜಟಾಗ್ರೇಣ ಬಭಾರ ಪರಮೇಶ್ವರಃ ।
ಶ್ರೀವರ್ಧದೇವಃ ಸಂಧತ್ತೇ ಜಿಹ್ವಾಗ್ರೇಣ ಸರಸ್ವತೀಮ್ ॥

"ಜಾಹ್ನವಿಯನ್ನು, ಅಂದರೆ ಗಂಗೆಯನ್ನು, ಪರಮೇಶ್ವರನು ತನ್ನ ಜಟೆಯಲ್ಲಿ ಧರಿಸಿದನು. ಶ್ರೀವರ್ಧದೇವನು ಸರಸ್ವತಿಯನ್ನು ನಾಲಿಗೆಯ ತುದಿಯಲ್ಲಿ ಧರಿಸಿದನು.

ಶ್ರೀವರ್ಧದೇವನ ಕಾವ್ಯವು ಜೈನರ ಪುರಾಣ ಕಾವ್ಯದ ಮಾದರಿಯಲ್ಲಿ ಬರೆದಿದ್ದಿರಬೇಕು. ಕುಬ್ಜನ ಶಾಸನ ಮತ್ತು ರವಿಕೀರ್ತಿಯು ಐಹೊಳೆ ಶಾಸನಗಳನ್ನು ಬಿಟ್ಟರೆ ಕನ್ನಡ ನಾಡಿನಲ್ಲಿ ರಚಿಸಲ್ಪಟ್ಟ ಮೊದಲ ಕಾವ್ಯಗಳು ಜೈನ ಕವಿಗಳ ಪುರಾಣಕಾವ್ಯಗಳು. ಇವುಗಳು ಅಶ್ವಘೋಷನ ಬುದ್ಧಚರಿತ ಮತ್ತು ಸೌಂದರಾನಂದಗಳ ಶೈಲಿ ಮತ್ತು ಉದ್ದೇಶಗಳಿಂದ ಪ್ರಭಾವಿತವಾಗಿವೆ. ಕಿ. ಶ. 7ನೇ ಶತಮಾನಕ್ಕೆ ಸೇರಿದ ಜಟಾಸಿಂಹನಂದಿಯು ಜೈನಮತದ ತತ್ತ್ವಪ್ರಚಾರವನ್ನು ಮಾಡಲು "ವಾರಾಂಗ ಚರಿತ" ಎಂಬ 31 ಸರ್ಗಗಳ ಕಾವ್ಯವನ್ನು ಬರೆದನು. ಇದನ್ನು ಎ. ಎನ್. ಉಪಾಧ್ಯೆಯವರು ಸಂಪಾದಿಸಿ ಪ್ರಕಟಿಸಿದ್ದಾರೆ. ಇದೇ ಉದ್ದೇಶವನ್ನಿಟ್ಟುಕೊಂಡು ಮುಂದೆ ಕ್ರಿ. ಶ. 10 ನೆಯ ಶತಮಾನದಲ್ಲಿ ವೀರನಂದಿಯು 'ಚಂದ್ರಪ್ರಭ ಚರಿತ' ಎಂಬ 18 ಸರ್ಗಗಳ ಮಹಾಕಾವ್ಯವನ್ನು ಬರೆದನು. ಇದು ಜೈನ ತೀರ್ಥಂಕರರಲ್ಲಿ ಏಳನೆಯವನಾದ ಚಂದ್ರಪ್ರಭನ ಚರಿತ್ರೆ. ಜೈನಮತದ ತತ್ವಗಳನ್ನು ಬೋಧಿಸುವುದು ಈ ಕಾವ್ಯದ ಉದ್ದೇಶ. ಮರಣೋನ್ಮುಖ ಅವಸ್ಥೆಯಲ್ಲಿದ್ದ ಮುದಿಎತ್ತನ್ನು ನೋಡಿ ಕನಕಪ್ರಭನ ಮನಸ್ಸಿನಲ್ಲಿ ಮಾಡಿದ ವೈರಾಗ್ಯದ ಭಾವನೆ ಇದು—

ಕ್ಷಣಭಂಗುರವೃತ್ತಿ ಜೀವಿತಂ ಭವಭಾಜಾಮಿತಿ ನಾತ್ರ ವಿಸ್ಮಯಃ।
ತದಿಹಾದ್ಭುತಮೇತದೀದೃಶಂ ಯದವಸ್ಯದ್ಭಿರಪಿ ಪ್ರಮುಹ್ಯತೇ॥

"ಪ್ರಪಂಚದಲ್ಲಿ ಜನ್ಮತಾಳಿದ ಪ್ರತಿಯೊಬ್ಬರ ಜೀವನವು ಕ್ಷಣಿಕವೆಂಬುದೇನು ಆಶ್ಚರ್ಯವಲ್ಲ. ಆದರೆ ಇದನ್ನು ತಿಳಿದುಕೊಂಡವರು ಗೊತ್ತಿದ್ದೂ ತಾವು ಶಾಶ್ವತರೆಂಬತೆ ನಡೆದುಕೊಳ್ಳುವುದು ನಿಜವಾದ ಆಶ್ಚರ್ಯ."

ವರ್ಣನೆಗಳ ಹೊಸತನವನ್ನು ಗುರುತಿಸಬಹುದು. ಉದಾಹರಣೆಗೆ—

ಜಯಶಬ್ದಂ ವಯಃಶಬ್ದೈಃ ಕುರ್ವತ್ಯಾಃ ಕಾನನಶ್ರಿಯಃ ।
ದಂತಾವಲಿರಿವಾಭಾತಿ ಕುಂದಕುಡ್ಮಲ ಸಂತತಿಃ ॥

"ಮಲ್ಲಿಗೆಯ ಮೊಗ್ಗುಗಳನ್ನು, ಪಕ್ಷಿಗಳ ನಾದದ ಮೂಲಕ ಮುನಿಗೆ ಜಯಕಾರ ಮಾಡುತ್ತಿರುವ ಉದ್ಯಾನಲಕ್ಷ್ಮಿಯ ದಂತಪಂಕ್ತಿಗೆ ಹೋಲಿಸಲಾಗಿದೆ."

ಇದೇ ಕಾಲದ ಮತ್ತೊಬ್ಬ ಜೈನ ಕವಿ ಹೇಮ

ಸೇನ. ಇವನಿಗೆ ವಿದ್ಯಾಧನಂಜಯ, ಧನಂಜಯ, ಪುಷ್ಪಸೇನಮುನಿ, ಎಂಬ ಬೇರೆ ಹೆಸರುಗಳಿದ್ದವು. ಇವನು ಸಂಸ್ಕೃತದಲ್ಲಿ ಮೊದಲ ದ್ವ್ಯರ್ಥಕಾವ್ಯವನ್ನು ಬರೆದ ಕೀರ್ತಿಗೆ ಪಾತ್ರನಾಗಿದ್ದಾನೆ. ಇವನು ತನ್ನ 'ರಾಘವ ಪಾಂಡವೀಯ' ದಲ್ಲಿ ರಾಮಾಯಣ – ಮಹಾಭಾರತಗಳ ಕಥೆಗಳನ್ನು ಏಕಕಾಲದಲ್ಲಿ ವರ್ಣಿಸಿದ್ದಾನೆ. ಜಿನಸೇನನ ಪಾರ್ಶ್ವಾಭ್ಯುದಯವು ಇದೇ ಕಾಲಕ್ಕೆ ಸೇರಿದುದು. ಇದರಲ್ಲಿ ಪಾರ್ಶ್ವನಾಥನ ಜೀವನ ಚರಿತ್ರೆಯನ್ನು ಹೇಳುವುದಕ್ಕೆ ಸಮಸ್ಯಾಪೂರಣ ಪದ್ಧತಿಯನ್ನು ಅನುಸರಿಸಲಾಗಿದೆ. ಕಾಲಿದಾಸನ ಮೇಘದೂತದ ಒಂದೊಂದು ಪಾದವನ್ನು ಇಟ್ಟುಕೊಂಡು ಉಳಿದ ಮೂರುಮೂರು ತನ್ನವೇ ಪಾದಗಳನ್ನು ಸೇರಿಸಿ ಶ್ಲೋಕಗಳನ್ನು ಹೆಣೆದಿದ್ದಾನೆ. ಚಾಲುಕ್ಯರ ಆಸ್ಥಾನದಲ್ಲಿದ್ದ ವಾದಿರಾಜನೆಂಬ ಜೈನಕವಿಯು 'ಯಶೊಧರಚರಿತ' ಮತ್ತು 'ಪಾರ್ಶ್ವನಾಥಚರಿತ' ಎಂಬೆರಡು ಕಾವ್ಯಗಳನ್ನು ರಚಿಸಿದ್ದಾನೆ. 'ಯಶೋಧರ ಚರಿತೆ'ಯು 4 ಸರ್ಗಗಳ ಚಿಕ್ಕ ಕಾವ್ಯ. ಇದರಲ್ಲಿ ಸಾಂಪ್ರದಾಯಿಕವಾದ ಪ್ರೇಮ-ಕಥೆಯ ಜಾಡನ್ನು ಬಿಟ್ಟು ನೈಜವಾದ ಗೃಹಸ್ಥಜೀವನದ ದುರಂತವನ್ನೂ ಅದಕ್ಕೆ ಕಾರಣವಾಗುವ ಸ್ತ್ರೀಯ ದೌರ್ಬಲ್ಯವನ್ನೂ ಚಿತ್ರಿಸಲಾಗಿದೆ. 'ಪಾರ್ಶ್ವನಾಥಚರಿತೆ'ಯು ಗುಣಭದ್ರನ 'ಉತ್ತರಪುರಾಣ' ವನ್ನು ಆಧರಿಸಿದ 12 ಸರ್ಗಗಳ ಕಾವ್ಯ.

ಹೊಯ್ಸಳರ ಮೂರನೆ ಬಲ್ಲಾಳನ ಆಶ್ರಯದಲ್ಲಿದ್ದ ಮೂರನೆ ವಿದ್ಯಾಚಕ್ರವರ್ತಿಯು 'ಕಾವ್ಯಪ್ರಕಾಶ' ಮತ್ತು 'ಅಲಂಕಾರಸರ್ವಸ್ವ'ಗಳಿಗೆ ವ್ಯಾಖ್ಯಾನಗಳನ್ನು ಬರೆದು ಕೀರ್ತಿಶಾಲಿಯಾದನು. ಇವನು 'ರುಕ್ಮಿಣೀ ಕಲ್ಯಾಣ'ವೆಂಬ 16 ಸರ್ಗಗಳ ಮಹಾಕಾವ್ಯವನ್ನು ಬರೆದನು. ಮೊದಲನೆ ಸರ್ಗದಲ್ಲಿ ಹೊಯ್ಸಳ ರಾಜರ ವಂಶಾವಳಿಯೂ ಕವಿಯ ವಂಶಪರಂಪರೆಯೂ ಬಂದಿವೆ. ಪುರಾಣವಸ್ತುವನ್ನು ಹಾಗೇ ಇಟ್ಟುಕೊಂಡು ಕಾವ್ಯ ಸೌಂದರ್ಯಕ್ಕಾಗಿ ವಿವಿಧ ವರ್ಣನೆಗಳನ್ನು ಪೋಣಿಸಿದ್ದಾನೆ. ಇದೇ ಉತ್ತಮ ಮಾರ್ಗವೆಂದು ಕವಿಯ ಅನಿಸಿಕೆ—

ದಿವ್ಯೇ ಕಥಾವಸ್ತುನಿ ನಾತ್ರ ಕಿಂಚಿದುತ್ಪಾದಿತಂ ನಾಪಿ
ವಿವಿಂಶ್ರಿತಂವಾ ।
ನಿತ್ಯೋಪಮೇಯೂ ರಸಭಾರಭೂಮ್ನಾ ಕೃತೌವರಂ
ವರ್ಣನಸೃಷ್ಟಿರಸ್ಯಾಂ ॥

"ದಿವ್ಯವಾದ ಈ ಕಥಾವಸ್ತುವಿನಲ್ಲಿ ಯಾವುದನ್ನೂ ಹೊಸದಾಗಿ ಕಲ್ಪಿಸಲಿಲ್ಲ, ಯಾವುದನ್ನೂ ಸೇರಿಸಿಲ್ಲ. ಈ ಕೃತಿಯಲ್ಲಿ ನಿತ್ಯಸುಂದರವಾದ, ಸರಸವಾದ ವರ್ಣನೆಗಳನ್ನು ಸೃಷ್ಟಿಸುವುದು ಉತ್ತಮಮಾರ್ಗ."

ಇದೇ ಕಾಲದಲ್ಲಿ ಮಧ್ವಾಚಾರ್ಯರ ನೇರ ಶಿಷ್ಯರಲ್ಲಿ ಒಬ್ಬರಾದ ತ್ರಿವಿಕ್ರಮ ಪಂಡಿತರು 'ಉಷಾಹರಣ' ಮತ್ತು 'ವಾಯುಸ್ತುತಿ'ಗಳನ್ನು ಬರೆದರು. 'ಉಷಾಹರಣ'ದಲ್ಲಿ ತ್ರಿವಿಕ್ರಮರ ಚಿತ್ರಕಾವ್ಯಕೌಶಲ್ಯವೂ ವ್ಯಕ್ತವಾಗಿದೆ. ಅವರ ಮಗ ನಾರಾಯಣ ಪಂಡಿತನು 'ಮಧ್ವವಿಜಯ' ಮತ್ತು 'ಮಣಿಮಂಜರಿ' ಎಂಬ ಮಧ್ವರಜೀವನವನ್ನು ವರ್ಣಿಸುವ ಕಾವ್ಯಗಳನ್ನು ಬರೆದು ಈ ಮಾದರಿಯ ಕಾವ್ಯಗಳಿಗೆ ಸ್ಫೂರ್ತಿ ನೀಡಿದರು. ನಾರಾಯಣ ಪಂಡಿತನ ಇನ್ನೊಂದು ಕೃತಿಯಾದ 'ಪಾರಿಜಾತಹರಣ'ವೆಂಬುದೊಂದು ಯಮಕಕಾವ್ಯ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ರಾಮ, ಕೃಷ್ಣ, ಮತಾಚಾರ್ಯರು, ಆಶ್ರಯದಾತರ ಜೀವನವನ್ನು ಚಿತ್ರಿಸುವ ಕಾವ್ಯಗಳು ರಚಿತವಾದವು. ವಿದ್ಯಾರಣ್ಯರ 'ಶಂಕರವಿಜಯ' ವ್ಯಾಸತೀರ್ಥರ 'ಜಯತೀರ್ಥವಿಜಯ' ಮತ್ತು ಸೋಮನಾಥನ 'ವ್ಯಾಸಯೋಗಿಚರಿತ', ಇವು ಮತಾಚಾರ್ಯರ ಜೀವನವನ್ನು ವರ್ಣಿಸುವ ಕಾವ್ಯಗಳು. ಗಂಗಾದೇವಿಯ 'ಮಧುರಾವಿಜಯ'ವು ವಿಜಯನಗರ ಕಾಲದ ಮೊದಲ ಮಹಾಕಾವ್ಯ. ಇದರಲ್ಲಿ ಸರಳ ಹಾಗೂ ಸರಸವಾದ ಶೈಲಿಯಲ್ಲಿ ಗಂಗಾದೇವಿಯು ತನ್ನ ಪತಿ ಕಂಪರಾಯನ ದಂಡೆಯಾತ್ರೆಗಳನ್ನು, ಮುಖ್ಯವಾಗಿ ಮಧುರೆಯ ಸುಲ್ತಾನನ ಮೇಲಿನ ದಂಡಯಾತ್ರೆಯನ್ನು, ವರ್ಣಿಸಿದ್ದಾಳೆ. ಈ ಕಾವ್ಯಕ್ಕೆ ಚಾರಿತ್ರಿಕ ಮಹತ್ವವಿದೆ. ಇದರ ಕಾವ್ಯ ಸೌಂದರ್ಯವೂ ಸಹೃದಯರಿಗೆ ಆಹ್ಲಾದಕರವಾಗಿದೆ. ಉದಾಹರಣೆಗೆ ಈ ವರ್ಣನೆಯನ್ನು ಗಮನಿಸಿರಿ —

ಚರಣ ವಿಲುಠಿತೋ ವಿಲಂಘಿತೋರುಃ
ಪರಿಗತ ನೀಪಿರವಾಪ್ತನಾಭಿಚಕ್ರಃ ।
ಸ್ತನತಟ ಲುಲಿತಃ ಕ್ರಮೇಣ ತಾಸಾಂ
ಮುಖ ಶಶಿಬಿಂಬಮ ಚುಂಬಮುಚುಂಬದಂಬುಪೂರಃ ॥



"ನೀರು ಮೊದಲು ಕಾಲಿನಲ್ಲಿ ಹರಿದಾಡಿ ಅನಂತರ ತೊಡೆಗೆ ಅಡರಿ, ಮೀರಿ, ಟೊಂಕ ಪ್ರದೇಶವನ್ನು ಸುತ್ತುವರೆದು ಅನಂತರ ನಾಭಿಯನ್ನು ತಲುಪಿ ಸ್ತನತಟವನ್ನು ಸ್ಪರ್ಶಿಸಿ ಕೊನೆಗೆ ಆ ಸ್ತ್ರೀಯರ ಮುಖಚಂದ್ರಮರಿಗೆ ಮುತ್ತು ನೀಡಿತು."

ಗಂಗಾದೇವಿಯೇ ಹೇಳುವಂತೆ—

ನ ಪ್ರಾರ್ಥನೀಯಃ ಸತ್‍ಕಾವ್ಯಶ್ರುತ್ಯೈ ಸಹೃದಯೋಜನಃ ।
ಸ್ವಾದು ಪುಷ್ಪರಸಾಸ್ವಾದೇಕಃ ಪ್ರೇರಯತಿ ಷಟ್‍ಪದಮ್ ॥

"ಸತ್ಕಾವ್ಯವನ್ನು ಕೇಳಲು ಸಹೃದಯನನ್ನು ಯಾರೂ ಪ್ರೇರಣೆ ಮಾಡಬೇಕಾಗಿಲ್ಲ. ಸವಿಯಾದ ಮಕರಂದವನ್ನು ಆಸ್ವಾದಿಸಲು ಯಾರು ದುಂಬಿಯನ್ನು ಒತ್ತಾಯ ಮಾಡುತ್ತಾರೆ?" ಮಧುರಾವಿಜಯವು ಅಂಥ ಸತ್ಕಾವ್ಯ. ಸಹೃದಯರಿಗೆ ಹೃದ್ಯ.

16 ನೇ ಶತಮಾನದ ಅಂತ್ಯಭಾಗದಲ್ಲಿ ಸೋದೆಮಠದ ವಾದಿರಾಜ ಸ್ವಾಮಿಗಳು 'ರುಕ್ಮಿಣೀಶ-ವಿಜಯ'ವೆಂಬ 21 ಸರ್ಗಗಳ ಮಹಾಕಾವ್ಯವನ್ನೂ 'ತೀರ್ಥ-ಪ್ರಬಂಧ' ವೆಂಬ ತೀರ್ಥ ಸ್ಥಾನಗಳ ವರ್ಣನೆಯ ಕಾವ್ಯವನ್ನೂ ರಚಿಸಿದರು. ಭಾಗವತ ದಶಮಸ್ಕಂಧದ ಕಥೆಯು 'ರುಕ್ಮಿಣೀಶವಿಜಯ'ದ ವಸ್ತು. ಇದರಲ್ಲಿ ಬರುವ ವರ್ಣನೆಗಳು ಮನೋಹರವಾಗಿವೆ. ಉದಾಹರಣೆಗೆ ಮೂರನೆಯ ಸರ್ಗದಲ್ಲಿ ಗೋಪಿಯರು ಯಶೋದೆಗೆ ಕೇಳುವ ಈ ಪ್ರಶ್ನೆ ಮಾರ್ಮಿಕವಾಗಿದೆ.—

ಗೃಹೇ ಗೃಹೇ ಯನ್ನವನೀತದುಗ್ಧದಧೀನಿ ಸರ್ವಾ
ಣ್ಯಪಹೃತ್ಯ ಭುಂಕ್ತೇ ।
ತಥಾಪಿ ತೃಪ್ತಿಂ ನ ಸುತಸ್ತವೈತಿ ಕಿಮಸ್ಯ ಭೂತಾನಿ
ವಸಂತಿ ಕುಕ್ಷೌ ॥

"ಮನೆಮನೆಯಲ್ಲಿ ಬೆಣ್ಣೆ, ಹಾಲು, ಮೊಸರನ್ನೆಲ್ಲಾ ಅಪಹರಿಸಿ ತಿನ್ನುತ್ತಾನಲ್ಲ, ಈ ನಿನ್ನ ಮಗ ಕೃಷ್ಣನಿಗೆ ಇಷ್ಟಾದರೂ ತೃಪ್ತಿಯಾಗದೇ. ಏನು ಇವನ ಹೊಟ್ಟೆಯಲ್ಲಿ ಭೂತಗಳು ನೆಲಸಿವೆಯೋ' ?"

ಇವು ಕೆಲವು ಮುಖ್ಯವಾದ ಕಾವ್ಯಗಳು.

ಕರ್ನಾಟಕವು ಸಂಸ್ಕೃತಕ್ಕೆ ನೀಡಿದ ವಿಶಿಷ್ಟ ಕೊಡುಗೆ ಚಂಪೂ. ಉಪಲಬ್ಧವಾಗಿರುವ ಮೊಟ್ಟ ಮೊದಲ ಚಂಪೂ ಕಾವ್ಯವನ್ನು ನೀಡಿದ ಕೀರ್ತಿ ಕರ್ನಾಟಕದ್ದು. ಆ ಚಂಪೂ ಕಾವ್ಯವನ್ನು ಬರೆದವನು ರಾಷ್ಟ್ರಕೂಟರಾಜ ತೃತೀಯ ಇಂದ್ರನ ಬೇಗಮ್ರಶಾಸನವನ್ನು ಕ್ರಿ. ಶ. 915 ರಲ್ಲಿ ಬರೆದ ತ್ರಿವಿಕ್ರಮ. ಆ ಚಂಪೂಕಾವ್ಯ ಏಳು ಉಚ್ಛ್ವಾಸಗಳನ್ನೊಳಗೊಂಡ ನಲ-ಚಂಪೂ. ದಮಯಂತಿಯು ದೇವತೆಗಳ ಪ್ರೇಮಯಾಚನೆಯನ್ನು ತಿರಸ್ಕರಿಸುವ ಪ್ರಸಂಗದೊಂದಿಗೆ ಈ ಚಂಪೂಕ್ಯಾವು ಮುಕ್ತಾಯವಾಗಿದೆ. ವರ್ಣನೆಗಳು ಸಾಂಪ್ರದಾಯಕವಾದರೂ ಮನೋಹರವಾಗಿವೆ. ಉದಾಹರಗೆ ನಲನ ವಿರಹದ ವರ್ಣನೆಯನ್ನು ನೋಡೋಣ—

ಅಪಸರತಿ ನ ಚಕ್ಷುಷೋ ಮೃಗಾಕ್ಷೀ
ರಜನಿರಿಯಂ ಚ ನ ಯಾತಿ ನೈತಿ ನಿದ್ರಾ ।
ಪ್ರಹರತಿ ಮದನೋಽಪಿ, ದುಃಖಿತಾನಾಂ
ಬತ ಬಹುಶೋಽಭಿಭವಂತ್ಯಪಾಯಾಃ ॥

"ಪ್ರಿಯತಮೆಯು ನನ್ನ ಕಣ್ಣಿನಿಂದ ಮರೆಯಾಗುತ್ತಿಲ್ಲ. ಈ ರಾತ್ರಿಯೂ ಚಲಿಸುತ್ತಿಲ್ಲ. ನಿದ್ರೆಯಂತೂ ಸುಳಿಯುತ್ತಿಲ್ಲ. ಮನ್ಮಥನೂ ಕೂಡ ಪ್ರಹಾರ ಮಾಡುತ್ತಿದ್ದಾನೆ. ಅಯ್ಯೋ, ದುಃಖಿತರಿಗೆ ಬಹಳ ಕಡೆಯಿಂದ ದುಃಖಗಳು ಎದುರಾಗುತ್ತವೆ."

ನಳ-ಹಂಸಿಯರ ಸಂವಾದದಲ್ಲಿ ಬರುವ ಶ್ಲೋಕಗಳು ಹಂಸ ಮತ್ತು ಆತ್ಮಪರವಾದ ಎರಡೆರಡು ಅರ್ಥಗಳನ್ನು ನೀಡುತ್ತವೆ. ಇವನ ಇನ್ನೊಂದು ಚಂಪೂ "ಮದಾಲಸ ಚಂಪೂ'.

ಸೋಮದೇವನ 'ಯಶಸ್ತಿಲಕಚಂಪೂ' ಎಂಬುದು ಆ ಕಾಲದ ಇನ್ನೊಂದು ಉತ್ತಮ ಚಂಪೂ ಕಾವ್ಯ. ಸೋಮದೇವನು ರಾಷ್ಟ್ರಕೂಟರ ಸಾಮಂತನಾಗಿದ್ದ ವೇಮುಲವಾಡ ಚಾಲುಕ್ಯರಾಜ ಅರಿಕೇಸರಿಯ ಆಸ್ಥಾನದಲಿದ್ದ. ಜೈನರಲ್ಲಿ ಪ್ರಚಾರದಲ್ಲಿರುವ ಯಶೋಧರನ ಅನೇಕ ಜನ್ಮಗಳ ಕಥೆಗಳು 'ಯಶಸ್ತಿಲಕ'ದ ವಸ್ತು. ಈ ಕಥೆಗಳನ್ನು ಹೇಳುವುದರಲ್ಲಿ ಸೋಮದೇವ ಸೂರಿಯು ವೈದಿಕ, ಆಗಮಿಕ, ತಾಂತ್ರಿಕ ಹಾಗೂ ಜಾನಪದ ವಿಚಾರಗಳನ್ನು ಕೌಶಲ್ಯದಿಂದ ಹೆಣೆದು ಈ ಚಂಪೂಗ್ರಂಥಕ್ಕೆ ವಿಶ್ವಕೋಶದ ಸ್ವರೂಪವನ್ನು ಕೊಟ್ಟ

ದ್ದಾನೆ. ಇದೇ ಸೋಮದೇವನು ಕೌಟಿಲ್ಯನ ಅರ್ಥಶಾಸ್ತ್ರವನ್ನು ಅನುಸರಿಸಿ 'ನೀತಿವಾಕ್ಯಾಮೃತ' ಎಂಬ ರಾಜನೀತಿ ಗ್ರಂಥವನ್ನೂ ಬರೆದನು. ಸುಮಾರು ಇದೇ ಕಾಲದಲ್ಲಿ 'ರಾಘವ-ಪಾಂಡವೀಯ' ಖ್ಯಾತೀಯ ಹೇಮಸೇನನ ಶಿಷ್ಯನಾಗಿದ್ದ ವಾದೀಭಸಿಂಹನು 'ಕ್ಷಾತ್ರಚಿಂತಾಮಣಿ' ಎಂಬ ಚಂಪೂ ಪ್ರಬಂಧವನ್ನೂ 'ಗದ್ಯಚಿಂತಾಮಣಿ' ಎಂಬ ಗದ್ಯ ಪ್ರಬಂಧವನ್ನೂ ಬರೆದನು. ಇವೆರಡರ ವಸ್ತುವೂ ಕೂಡ ಜೀವಂಧರನ ಚರಿತ್ರೆ. ಹೊಯ್ಸಳರ ಕಾಲದಲ್ಲಿ ಮೂರನೆ ವಿದ್ಯಾಚಕ್ರವರ್ತಿಯ ಅಜ್ಜನಾದ ಎರಡನೆ ವಿದ್ಯಾಚಕ್ರವರ್ತಿಯು 'ಗದ್ಯಕರ್ಣಾಮೃತ' ಎಂಬ ಗದ್ಯ ಕಾವ್ಯವನ್ನು ಬರೆದನು. ಇದರಲ್ಲಿ ಎರಡನೆ ನರಸಿಂಹನಿಗೂ ಮತ್ತು ಪಾಂಡ್ಯ-ಮಗದ-ಪಲ್ಲವರಿಗೂ ಮಧ್ಯೆ ನಡೆದ ಯುದ್ಧದ ವರ್ಣನೆಯಿದೆ. ಹೆಸರಿಗೆ ತಕ್ಕಂತೆ ಈ 'ಗದ್ಯಕರ್ಣಾಮೃತ'ವು ಕಿವಿಗೆ ಇಂಪು. ಇದೊಂದು ಶಿವ-ಪಾರ್ವತಿಯರ ವಿಹಾರ ಸಂದರ್ಭ—

"ಅತ್ರಾಂತರೇ ವನಲತಾಂತರಿತ ವಿಗ್ರಹಾ ದೇವೀಪರಿಚಾರಿಕಾಸು ಕಾಚಿತ್ ಪ್ರಾಭೃತಿಕಾ ನಾಮ ಕಲಮದುರಾಮಿಮಾಂ ಗಾಥಾಮಗಾಥಯತ್—

ತಮಸಿಸಖಿಯೂಥಿಕೇ ತ್ಯಜ ಗೌರೀನಿಶ್ವಸಿತಸೌಭಶ್ಚ ರ್ಥಾಮ್ ।
ಕಿಮಕೃತ ಸಮುಚ್ಛ್ವಸಂತೀಸಾಸೂಯಂ ಮಾಲಶೀಲತಿಕಾ॥

ಅಥಶ್ರುತ್ವಾ ನಿಶೀಥ ಸುಚಿನೀಮಿಮಾ ಮಾರ್ಯಾಮುಮಾಪತಿರುಮಯಾ ಸಹ ನಮೇರುತಲಾದುದತಿಷ್ಠತ್। ಉತ್ಥಾಯಚ ನಿಜನಿಕೇತನಾಭಿಮುಖಂ ವೃಷಭಕೇತನಃ ಕಾಂತಯಾ ಸಹ ಪರಿಣತಹಿಮಕರಕಿಸಲಯಿತೇನ ಕೈಲಾಸಾನುವರ್ತ್ಮನಾ ಜಗಾಮ। "

ವಿಜಯನಗರದ ರಾಜ ಅಚ್ಯುತರಾಯನ ರಾಣಿಯರಲ್ಲಿ ಒಬ್ಬಳಾಗಿದ್ದ ತಿರುಮಲಾಂಬೆಯು 'ವರದಾಂಬಿಕಾಪರಿಣಯು" ವೆಂಬ ಚಂಪೂ ಕಾವ್ಯವನ್ನು ಬರೆದಳು. ಇದರಲ್ಲಿ ಅಚ್ಯುತರಾಯನ ಬಾಲ್ಯ, ಯೌವನ ಮತ್ತು ವರದಾಂಬಿಕೆಯೊಂದಿಗೆ ಪರಿಣಯ ವೃತ್ತಾಂತಗಳು ಬಂದಿವೆ. ಇದು 'ವರ್ಣನಾ ಪ್ರಧಾನವಾಗಿರುವ ಕಾವ್ಯವಾಗಿದ್ದು ಸಂಸ್ಕೃತ ಶೈಲಿಯ ಮೇಲೆ ತಿರುಮಲಾಂಬೆಗಿದ್ದ ಪ್ರಭುತ್ವವನ್ನು ವ್ಯಕ್ತಪಡಿಸುತ್ತದೆ. ಉದಾಹರಣೆಗೆ ಸರೋವರದಲ್ಲಿ ಜಲಕ್ರೀಡೆಯಾಡುವ ಓರ್ವ ಸುಂದರಿಯ ವರ್ಣನೆಯನ್ನು ಗಮನಿಸಿರಿ—

ಮುಹುಃ ಸರೋವಾರಿಷು ಕೇಳಿಲೋಲಾ
ನಿಮಜ್ಜನೋನ್ಮಜ್ಜನ ಮಾಚರಂತೀ ।
ಬಲಾಹಕಾಂತ: ಪರಿದೃಶ್ಯಮಾನಾ
ಸೌದಾಮನೀವಾಜನಿ ಚಂಚಲಾಕ್ಷೀ ॥

"ಸರೋವರದಲ್ಲಿ ಮುಳುಗೇಳುತ್ತಿರುವ ಚಂಚಲಾಕ್ಷಿಯೋರ್ವಳು, ಮೋಡಗಳ ಅಂಚಿನಲ್ಲಿ ಮೂಡಿ ಮರೆಯಾಗುವ ಮಿಂಚಿನ ಬಳ್ಳಿಯಂತೆ ಕಂಡಳು." ಹೀಗೆ 'ವರದಾಂಬಿಕಾಪರಿಣಯ'ವು ಮನೋಹರವಾದ ಚಂಪೂಕಾವ್ಯ. ಕ್ರಿ. ಶ. 1500 ರಲ್ಲಿ ಅನಂತಭಟ್ಟನು 'ಭಾರತ-ಚಂಪೂ" ಕಾವ್ಯವನ್ನು ರಚಿಸಿದನು. ಕವಿಕುಂಜರನೆಂಬ ಬಿರುದನ್ನು ಗಳಿಸಿದ ಅನಂತಭಟ್ಟನ ವರ್ಣನೆಗಳು ಮನೋಹರವಾಗಿವೆ. ಪಾಂಡುರಾಜನ ಬೇಟೆಯ ವರ್ಣನೆಯಲ್ಲಿನ ಈ ಕಲ್ಪನೆಯು ಮನೋಹರವಾಗಿದೆ.—

ಕುರಂಗಯೂನಾಂ ಕುರುತೇ ಸ್ಮ ಭೀತಿಂ
ಗುರೋಃ ಕುಲಸ್ಯಾಮೃತದೀಧಿತೇರ್ನ: ।
ಸಜಾತಿರೇಷಾಂ ತನುತೇ ಕಲಂಕಂ
ಇತೀವ ರೋಷಾದಿಷುಭಿ: ಸ ಪಾಂಡುಃ ॥

"ಜಿಂಕೆ ತನ್ನ ಕುಲದ ಮೂಲ ಪುರುಷನಾದ ಚಂದ್ರಮನಲ್ಲಿ ಕಲಂಕವನ್ನುಂಟು ಮಾಡಿದೆ ಎಂಬ ಕೋಪದಿಂದ ಅದರ ವಂಶವನ್ನೇ ನಾಶಮಾಡಲು ಪಾಂಡುರಾಜನು ಬಾಣಗಳನ್ನು ಬಿಡುವಂತಿತ್ತು.

ಹೀಗೆ ಕರ್ನಾಟಕದಲ್ಲಿ ಸಂಸ್ಕೃತ ಚಂಪೂ ಕಾವ್ಯದ ಪರಂಪರೆಯು ಬೆಳೆದು ಬಂದಿದೆ. ಕನ್ನಡ ಕವಿಗಳಿಗೆ ಚಂಪೂ ಕಾವ್ಯವು ಅತ್ಯಂತ ಪ್ರಿಯವಾದುದು.

ಸಂಸ್ಕೃತ ನಾಟಕದ ಕ್ಷೇತ್ರಕ್ಕೆ ಕರ್ನಾಟಕದ ಕೊಡುಗೆ ಮಹಾಕಾವ್ಯ ಮತ್ತು ಚಂಪೂಕಾವ್ಯಗಳಿಗಿಂತ ಕಡಿಮೆಯೇನಲ್ಲ. ನಮಗೆ ಗೊತ್ತಿರುವಂತೆ ಕನ್ನಡ ನಾಡಿನಲ್ಲಿ ಬರೆದ ಮೊದಲ ಸಂಸ್ಕೃತ ನಾಟಕವು 'ಕೌಮುದೀಮಹೋತ್ಸವ." ಇದನ್ನು ಎರಡನೇ ಪುಲಿಕೇಶಿಯ ಸೊಸೆಯೂ ಚಂದ್ರಾದಿಪತ್ಯನ ಪತ್ನಿಯೂ ಆಗಿದ್ದ ವಿಜಯಾ ಅಥವಾ ವಿಜ್ಜಿಕೆಯು



ಬರೆದಳು. ಪಾಟಲೀಪುತ್ರದ ಕಲ್ಯಾಣವರ್ಮನು ತನ್ನ ತಂದೆಯನ್ನು ಕೊಂದ ಚಂದ್ರಸೇನನ ಮೇಲೆ ಸೇಡು ತೀರಿಸಿಕೊಂಡು ಮತ್ತೆ ಸಿಂಹಾಸನಕ್ಕೆ ಬಂದದು 5 ಅಂಕಗಳ ಈ ನಾಟಕದ ವಸ್ತು. ವಿಜಯನಗರದ ರಾಜ ಹರಿಹರನ ಆಸ್ಥಾನದಲ್ಲಿದ್ದನೆಂದು ಭಾವಿಸಲಾದ ಭಾಸ್ಕರನು 'ಉನ್ಮತ್ತರಾಘವ' ಎಂಬ ಅಪೂರ್ವ ಮಾದರಿಯ "ಪ್ರೇಕ್ಷಣಕ"ವನ್ನು ರಚಿಸಿದನು. ಇದೊಂದು ಉಪರೂಪಕ. ಇದರಲ್ಲಿ ದುರ್ವಾಸನ ಶಾಪಕ್ಕೆ ಗುರಿಯಾಗಿ ಹರಿಣಿಯಾಗಿ ಪರಿವರ್ತಿತಳಾಗಿದ್ದ ಸೀತೆಯನ್ನು ಹುಡುಕುತ್ತಾ ರಾಮನು ಉನ್ಮತ್ತನಂತೆ ವರ್ತಿಸುತ್ತಾನೆ. ಅಗಸ್ತ್ಯರ ಸಹಾಯದಿಂದ ರಾಮ–ಸೀತೆಯರ ಸಮಾಗಮವಾಗುತ್ತದೆ. ಕರುಣರಸಪೋಷಣೆಯು ಹೃದಯಂಗಮವಾಗಿದೆ. ಉದಾಹರಣೆಗೆ ರಾಮನ ದುಃಖೋದ್ಗಾರವನ್ನು ನೋಡಿರಿ—

ವಿರಹಂ ಮಮ ಸೋಢುಮಕ್ಷಮಾ ತ್ವಂ
ವನವೀಥಿಷ್ವಪಿ ಮಾಮನುದ್ರುತಾಸಿ ।
ಅಕೃತಾಗಸಮೇನಮದ್ಯ ಮುಕ್ತ್ವಾ
ವದ ಕುತ್ರಾಸಿ ಕುರಂಗ ಶಾಬನೇತ್ರೇ ॥

"ಎರಳೆಗಣ್ಣಳೆ, ನನ್ನ ಅಗಲಿಕೆಯನ್ನು ಸಹಿಸಲಾರದೆ ಅರಣ್ಯದ ಹಾದಿಗಳಲ್ಲಿ ನನ್ನನ್ನೇ ಹಿಂಬಾಲಿಸಿದ ನೀನು, ಈಗ ಯಾವ ತಪ್ಪನ್ನೂ ಮಾಡದ ನನ್ನನ್ನು ಬಿಟ್ಟೆಲ್ಲಿ ಹೋದೆ ?"

ವಿಜಯನಗರದ ಅರಸರಲ್ಲಿ ಅಗ್ರಗಣ್ಯನಾದ ಕೃಷ್ಣದೇವರಾಯನು 'ಜಾಂಬವತೀಕಲ್ಯಾಣ' ಮತ್ತು 'ಉಷಾಪರಿಣಯ' ಎಂಬ ನಾಟಕಗಳನ್ನು ಬರೆದನು.

ಆಧುನಿಕ ಯುಗಕ್ಕೆ ಹತ್ತಿರವಾದ 17, 18 ಮತ್ತು 19 ನೆಯ ಶತಮಾನಗಳಲ್ಲಿ ಮೈಸೂರು ಅರಸರು, ಮತ್ತು ಚಿಕ್ಕ ಚಿಕ್ಕ ನಾಯಕರು-ಪಾಳೆಯಗಾರರ ಆಶ್ರಯದಲ್ಲಿ ಸಂಸ್ಕೃತ ಸಾಹಿತ್ಯವು ವಿಪುಲವಾಗಿ ಬೆಳೆಯಿತು. ಈ ಕಾಲದ ಎಲ್ಲಾ ಕೃತಿಗಳನ್ನು ಹೆಸರಿಸುವುದಕ್ಕೂ ಪ್ರಕೃತ ಭಾಷಣದಲ್ಲಿ ವೇಳೆಯಿಲ್ಲ. ಈ ಕಾಲದ ಕನ್ನಡದ ಕವಿಗಳು ಸಂಸ್ಕೃತ ಮಹಾಕಾವ್ಯ, ಚಂಪೂ ಮತ್ತು ನಾಟಕ ಪ್ರಕಾರಗಳೆಲ್ಲಕ್ಕೂ ಹೆಚ್ಚಿನ ಕೊಡುಗೆಯನ್ನು ನೀಡಿದ್ದಾರೆ. ಅದರ ಸ್ಥೂಲಪರಿಚಯವನ್ನು ಮಾತ್ರ ಮಾಡಿಕೊಡುವುದು ಪ್ರಕೃತದಲ್ಲಿ ಸಾಧ್ಯ. ಸಂಸ್ಕೃತದ ದ್ವ್ಯರ್ಥಕಾವ್ಯವನ್ನು ಬರೆದ ಕೀರ್ತಿ ಕರ್ನಾಟಕದ ಹೇಮಸೇನನಿಗೆ ಸೇರಿದರೆ ಕರ್ನಾಟಕದಲ್ಲಿ ಮೊದಲ ಸಂಸ್ಕೃತ ತ್ರ್ಯರ್ಥಕಾವ್ಯವನ್ನು ಬರೆದ ಯಶಸ್ಸು ಮೈಸೂರು ಉದಯೇಂದ್ರಪುರಂ ಅನಂತಾಚಾರ್ಯನಿಗೆ ಸಲ್ಲಬೇಕು. ಇವನು "ಯಾದವ–ರಾಘವ-ಪಾಂಡವೀಯಮ್" ಎಂಬ ಕಾವ್ಯದಲ್ಲಿ ಭಾಗವತ–ರಾಮಾಯಣ-ಮಹಾಭಾರತಗಳ ಕಥೆಗಳನ್ನು ಏಕಕಾಲದಲ್ಲಿ ನಿರೂಪಿಸಿದ್ದಾನೆ. ಇವನ ಮಗಳು ತ್ರಿವೇಣಿ. ಈ ತ್ರ್ಯರ್ಥಕಾವ್ಯವನ್ನು ಬರೆದು ಮುಗಿಸುವ ಕಾಲಕ್ಕೆ ಅವಳು ಹುಟ್ಟಿದಳೆಂದು ಆ ಹೆಸರಿನಿಂದ ಕರೆಯಲ್ಪಟ್ಟಳು. ಈಕೆಯು 'ಶುಕಸಂದೇಶ.' 'ಭೃಂಗಸಂದೇಶ' ಎಂಬ ಸಂದೇಶಕಾವ್ಯಗಳನ್ನೂ, 'ರಂಗಾಭ್ಯುದಯ,' 'ಸಂಪತ್ಕುಮಾರವಿಜಯ' ಎಂಬ ಕಾವ್ಯಗಳನ್ನೂ, 'ರಂಗರಾಟ್,' 'ತತ್ತ್ವಮುದ್ರಾಭದ್ರೋದಯ' ಎಂಬ ನಾಟಕಗಳನ್ನೂ, ಅನೇಕ ಸ್ತೋತ್ರಗಳನ್ನೂ ರಚಿಸಿದಳು. ಉಭಯ ಭಾಷಾಕವಿಯಾಗಿದ್ದ ಷಡಕ್ಷರದೇವರು ಸಂಸ್ಕೃತದಲ್ಲಿ "ಕವಿಕರ್ಣರಸಾಯನ"ವನ್ನು ರಚಿಸಿದರು. ಈ ಕಾವ್ಯವು ಮೈಸೂರು ಪ್ರಾಚ್ಯಸಂಶೋಧನ ಸಂಸ್ಥೆಯಿಂದ ಪ್ರಕಟಿಸಲ್ಪಟ್ಟಿದೆ. ಪರಮ ಶಿವಭಕ್ತನಾಗಿದ್ದ ಚೋಳರಾಜನ ಚರಿತ್ರೆಯು ಈ ಕಾವ್ಯದಲ್ಲಿ ವರ್ಣಿತವಾಗಿವೆ, ಈ ಕವಿಯ ಶೈಲಿ ಎಷ್ಟು ಸರಸ ಸುಂದರವೆಂಬುದು "ರಾಜಶೇಖರವಿಳಾಸ" ಮತ್ತು "ಶಬರಶಂಕರವಿಳಾಸ"ಗಳನ್ನು ಅಭ್ಯಸಿಸಿದವರಿಗೆಲ್ಲಾ ಗೊತ್ತು. ಸಂಸ್ಕೃತದಲ್ಲೂ ಇವರ ಶೈಲಿ ಅಷ್ಟೇಮಧುರ. ಉದಾಹರಣೆಗೆ ಸಂಪಿಗೆ ಹೂವುಗಳ ಈ ವರ್ಣನೆಯನ್ನು ನೋಡಿರಿ —

ಮಲ್ಲೀವಧೂಲಸಿತಲಾಸ್ಯಂ, ಅನಂಗಶೌರ್ಯ–
ಗದ್ಯಾವಲೀಪಠನತತ್ಪರಕೀರವಕ್ತ್ರಂ ।
ಚೈತ್ರೇಣ ದೀಪನಿವಹಾ ನಿಹಿತಾ ಇವಾಸನ್
ದ್ರಷ್ಟುಂ ವನಾಂಧತಮಸೇ ಸ್ಫುಟಚಂಪಕೌಘಾಃ ॥

"ಮಲ್ಲಿಗೆಯ ಬಳ್ಳಿಯೆಂಬ ಕನ್ಯೆಯು ನಾಟ್ಯವಾಡುತ್ತಾಳೆ. ಗಿಳಿಯು ಮನ್ಮಥನ ಶೌರ್ಯವನ್ನು ವರ್ಣಿಸುವ ಗದ್ಯವನ್ನು ಓದುವುದರಲ್ಲಿ ನಿರತವಾಗಿದೆ. ಇವುಗಳನ್ನು ನೋಡಲೋಸುಗವೋ ಎಂಬಂತೆ ಚೈತ್ರನು ವನಾಂಧಕಾರದಲ್ಲಿ ಇಟ್ಟ ದೀವಿಗೆಗಳಂತೆ ಸಂಪಿಗೆ

ಹೂವುಗಳು ಪ್ರಕಾಶಿಸುತ್ತಿದ್ದವು."

ಮುಮ್ಮಡಿ ಕೆಂಪೇಗೌಡನ ಆಸ್ಥಾನದಲ್ಲಿದ್ದ ಏಕಾಂಬರ ಶಾಸ್ತ್ರಿಯು 'ವೀರಭದ್ರವಿಜಯ' ಎಂಬ ಚಂಪೂಕಾವ್ಯವನ್ನು ರಚಿಸಿದನು. ಇದರಲ್ಲಿ ಕೆಂಪೇಗೌಡನ ವಂಶದ ವರ್ಣನೆಯು ಬರುತ್ತದೆ. ಹೊಸೂರಿನ ಕಾಶೀಪತಿಯು 'ಮುಕುಂದಾನಂದ ಭಾಣ' ಎಂಬ ರೂಪಕವನ್ನು ಬರೆದನು. ಇದರಲ್ಲಿ ಅನೇಕ ವರ್ಣನೆಗಳು ಬರುತ್ತವೆ. ಎಲ್ಲಕ್ಕಿಂತ ಮಿಗಿಲಾದ ಅಡಿಗೆಯವನ ವರ್ಣನೆಯ ಕೊನೆಯಲ್ಲಿ "ಪಂಡಿತಮಿವ ಪರಿಚಿತಸಕಲ ರಸಪರಿಪಾಕಂ ಕಮಪಿ ಕಜ್ಜಲ-ಮೇಚಕಂ ಪಾಚಕಮ ಪಶ್ಯಂ" ಎಂಬುದು ಗಮನಾರ್ಹವಾಗಿದೆ. ಸರ್ವಾಧಿಕಾರಿ ಕಳಲೆ ನಂಜರಾಜನು ಇಮ್ಮಡಿ ಕೃಷ್ಣರಾಜರ ಕಾಲದಲ್ಲಿ "ಸಂಗೀತ-ಗಂಗಾಧರ"ವನ್ನು ರಚಿಸಿದನು. ಅವನ ಆಸ್ಥಾನದಲ್ಲಿದ್ದ ನರಸಿಂಹ ಕವಿಯು 'ನಂಜರಾಜಯಶೋ-ಭೂಷಣ"ವೆಂಬ ಅಲಂಕಾರ ಗ್ರಂಥವನ್ನು 'ಪ್ರತಾಪರುದ್ರಯಶೋಭೂಷಣ'ದ ಮಾದರಿಯಲ್ಲಿ ರಚಿಸಿದ್ದಾನೆ. ಇದರ ನಾಟಕಪ್ರಕರಣದಲ್ಲಿ "ಚಂದ್ರಕಲಾಪರಿಣಯ"ವೆಂಬ ಮಾದರಿ ನಾಟಕವನ್ನು ಸೇರಿಸಿದ್ದಾನೆ.

18 ನೇ ಶತಮಾನದ ಕರ್ನಾಟಕದ ಕವಿಗಳಲ್ಲಿ ಅಗ್ರಗಣ್ಯನಾದವನು ಮದುಗಿರಿ ಪ್ರಧಾನ ವೆಂಕಾಮಾತ್ಯ. ಇವನ ಊರು ಮೈಸೂರಿನ ಹತ್ತಿರದ ಚಟ್ನಹಳ್ಳಿ ಬಳಿಯ ರಾಮಪುರ. ಇವನು ಹೈದರಾಲಿಯ ಮಂತ್ರಿಯಾಗಿದ್ದನು. ಇವನು 'ಅಲಂಕಾರಮಣಿದರ್ಪಣ' ವೆಂಬ ವಿದ್ವತ್ಪೂರ್ಣವಾದ ಗ್ರಂತವನ್ನು ಸಂಸ್ಕೃತ ಅಲಂಕಾರ ಶಾಸ್ತ್ರಕ್ಕೆ ದೇಣಿಗೆಯಾಗಿ ಕೊಟ್ಟಿರುವನಲ್ಲದೆ, ಸಂಸ್ಕೃತ ಕಾವ್ಯದ ವಿವಿಧಪ್ರಕಾರಗಳಲ್ಲಿ ಕೃತಿಯನ್ನು ರಚಿಸಿ ಸಂಸ್ಕೃತ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾನೆ. 'ಸುಧಾಝರೀ' ಎಂಬ ಗದ್ಯಕಾವ್ಯವನ್ನೂ 'ಕುಶಲವಚಂಪೂ' ಎಂಬ ಚಂಪೂ-ಕೃತಿಯನ್ನೂ 'ಸೌಗಂಧಿಕಾಹರಣ' 'ಸೀತಾವಿಲಾಸಕಾವ್ಯ' 'ರಾಮನವರಸಮಂಜರೀ' ಎಂಬ ಕಾವ್ಯಗಳನ್ನೂ 'ಕಾಮವಿಲಾಸಭಾಣ' 'ಕುಕ್ಷಿಂಭರಭೈಕ್ಷಪ್ರಹಸನ' 'ಮಹೇಂದ್ರವಿಜಯಡಿಮ' 'ವೀರರಾಘವವ್ಯಾಯೋಗ' ಲಕ್ಷ್ಮೀ-ಸ್ವಯಂವರಸಮವಕಾರ' 'ವಿಬುಧದಾನವಸಮವಕಾರ' 'ಸೀತಾಕಲ್ಯಾಣವೀಥೀ' 'ರುಕ್ಮಿಣೀಮಾಧವಾಂಕ' 'ಉರ್ವಶೀಸಾರ್ವಭೌಮ-ಈಹಾಮೃಗ' 'ರಸಿಕರಂಜನೀನಾಟಕ' ಎಂಬ ಹತ್ತು ರೂಪಕಗಳನ್ನೂ ಬರೆದಿದ್ದಾನೆ. ಒಟ್ಟಿನಲ್ಲಿ ಸಂಸ್ಕೃತ ಸಾಹಿತ್ಯಕ್ಕೆ ಪ್ರಧಾನವೆಂಕಾಮಾತ್ಯನು ನೀಡಿರುವ ಕೊಡುಗೆಯು ಒಬ್ಬ ಪಿಎಚ್.ಡಿ. ವಿದ್ಯಾರ್ಥಿಯು ತನ ಮಹಾಪ್ರಬಂಧಕ್ಕೆ ಆರಿಸಿಕೊಳ್ಳುವಷ್ಟು ವಿಸ್ತಾರವೂ ಅಮೂಲ್ಯವೂ ಆಗಿದೆ.

19 ನೇ ಶತಮಾನದಲ್ಲಿ ಪರಕಾಲ ಮಠದ ಸ್ವಾಮಿಗಳಾಗಿದ್ದ ಶ್ರಿ ಕೃಷ್ಣಬ್ರಹ್ಮತಂತ್ರ ಪರಕಾಲ ಯತಿಗಳು ಪ್ರಧಾನ ವೆಂಕಾಮಾತ್ಯನಂತೆ ಚಂಪೂ, ಗದ್ಯ, ಲಘುಕಾವ್ಯ, ರೂಪಕ, ಅಲಂಕಾರ, ಮುಂತಾದ ಎಲ್ಲಾ ಕ್ಷೇತ್ರಗಳಿಗೆ ತಮ್ಮ ದೇಣಿಗೆಯನ್ನಿತ್ತಿದ್ದಾರೆ. 'ಪರಕಾಲವಿಜಯಚಂಪೂ,' 'ರಂಗರಾಜ ಚಂಪೂ,' ಮುಂತಾದವು ಅವರ ಚಂಪೂ ಕಾವ್ಯಗಳು. 'ಆಚಾರ್ಯ ಗದ್ಯ' ಅವರ ಗದ್ಯಕೃತಿ. 'ಶ್ರೀ ರಾಜವಂಶರತ್ನಾಕರ'' ಮುಂತಾದುವು ಲಘುಕಾವ್ಯಗಳು 'ವಿಕ್ರಾಂತರಾಘವವ್ಯಾಯೋಗ' 'ಉನ್ಮತ್ತ ಪಾಂಡವ-ಪ್ರೇಕ್ಷಣಿಕ' "ಸುಭದ್ರಾಪರಿಣಯನಾಟಕ' ಅವರ ರೂಪಕಗಳು. 'ಅಲಂಕಾರಮಣಿಹಾರ'ವು ಅವರ ಅಲಂಕಾರಗ್ರಂಥ. ಇದು ವಿದ್ವತ್ಪೂರ್ಣವಾಗಿದೆ.

ಮಂಡಿಕಲ್ ರಾಮ ಶಾಸ್ತ್ರಿಗಳು 'ಭೈಮೀಪರಿಣಯ ನಾಟಕ'' 'ಮೇಘಪ್ರತಿಸಂದೇಶ' 'ಕುಂಭಾಭಿಷೇಕ ಚಂಪೂ' ಕೃತಿಗಳನ್ನು ರಚಿಸಿದರು. ವರದಾಚಾರ್ಯನು "ಗುರುರಾಜಚಂಪೂ" ವಿನಲ್ಲಿ ಶೃಂಗೇರಿಯ 27ನೆಯ ಗುರುಗಳಾಗಿದ್ದ ನೃಸಿಂಹಭಾರತಿಗಳ ತೀರ್ಥಯಾತ್ರೆಯನ್ನು ವರ್ಣಿಸಿದ್ದಾನೆ. ಆಲವಟ್ಟಿ ಶ್ರೀನಿವಾಸಾಚಾರ್ಯನು "ಅನಿರುದ್ಧವಿಜಯ" ಅಥವಾ 'ಉಷಾಪರಿಣಯ' ಎಂಬ ನಾಟಕವನ್ನು ಬರೆದನು. ಚಾಮರಾಜನಗರದ ರಾಮಶಾಸ್ತ್ರಿಗಳು 'ಸೀತಾರಾವಣಸಂವಾದಝರೀ' ಎಂಬ ಚಿತ್ರವರ್ಣಾತ್ಮಕ ಕಾವ್ಯವನ್ನು ರಚಿಸಿದ್ದಾರೆ. ಪ್ರತಿಯೊಂದು ಶ್ಲೋಕದಲ್ಲಿ ಸಾಮಾನ್ಯಾರ್ಥ ಮತ್ತು ಆಂತರಿಕಾರ್ಥಗಳಿವೆ. ಉದಾಹರಣೆಗೆ—

ಜುಷ್ಟೋ ಮಂತ್ರಿಜನೇನ ಸಂಗತಧಿಯಾ ಮದ್ವನ್ನ ಕಶ್ಚಿತ್ಪ್ರಭುಃ
ಪ್ರಾಪ್ತಾತ್ಮುಜ್ಜ್ವಲಕೀರ್ತಿಸಂಹಿತರಹಂ ತ್ರೈಸ್ಪ್ರೈಷ್ಟರಿತ್ರೈರ್ನಿಜೈಃ ।
ರಾಮೋ ನಾರ್ಹತಿ ತುಲ್ಯತಾಂಜನಕಜೇಸಂಗ್ರಾಮಸಿಂಹಸ್ಯ ಮೇ
ಸರ್ವ ಸತ್ಯಮುಶೀ ಪರಂತ್ವನುಚಿತಃ ಸಂನ್ಯಾಸ ಏಕಸ್ತವ ।

ರಾವಣನು ಸೀತೆಯನ್ನು ಕುರಿತು ಹೀಗೆ ಹೇಳುವನು – "ಸೀತೆ, ನಾನು ಬುದ್ಧಿವಂತರಾದಗಳಿಂದ ಕೂಡಿದವನಾಗಿದ್ದೇನೆ. ನನ್ನನ್ನು ಸರಿಗಟ್ಟುವ ಮತ್ತೊಬ್ಬ ಪ್ರಭುವಿಲ್ಲ. ನನ್ನ ಸದ್ಗುಣಗಣದಿಂದ ಕೀರ್ತಿಯನ್ನು ಹೊಂದಿರುವೆನು. ಸಂಗ್ರಾಮಸಿಂಹನಾದ ನನ್ನೊಡನೆ ಯುದ್ಧಮಾಡುವುದಕ್ಕೆ ನಿನ್ನ ರಾಮನು ಸಮನಲ್ಲ." ಇದು ಮೂರು ಪಾದಗಳ ಸಾಮಾನ್ಯ ಅರ್ಥ. ನಾಲ್ಕನೇ ಪಾದದಲ್ಲಿ ಸೀತೆ ಹೇಳುತ್ತಾಳೆ. "ಎಲ್ಲವೂ ಸರಿ, ಆದರೆ ಸಂನ್ಯಾಸವು ನಿನಗೆ ತರವಲ್ಲ" ಎಂದು. 'ಸಂ'ನ್ಯಾಸ' ಬೇಡ ಅಂದರೆ 'ಸಂ' ಉಪಸರ್ಗವನ್ನು ಪ್ರಯೋಗಿಸುವುದು ಬೇಡ ಎಂದರ್ಥ. ಸಂಗತಧಿಯಾ ಎಂಬುದಕ್ಕೆ ಗತಧಿಯಾ ಎಂದೂ, ಸಂಗ್ರಾಮಸಿಂಹಸ್ಯ ಎಂಬುದಕ್ಕೆ ಗ್ರಾಮಸಿಂಹಸ್ಯ ಎಂದೂ ಓದಿಕೊಂಡರೆ– "ಬುದ್ಧಿ ಇಲ್ಲದ ಮಂತ್ರಿಗಳಿಂದ ಕೂಡಿದ ಅಪೂರ್ವ ಪ್ರಭುನಾನು ಎಂದೂ, ಗ್ರಾಮಸಿಂಹನಾದ ನನ್ನೊಡನೆ ರಾಮನು ಕಾದುವುದು ಸರಿಯಲ್ಲ'' ಎಂದು ಅರ್ಥವಾಗುತ್ತದೆ. ಇದೊಂದು ಅಪೂರ್ವಮಾದರಿಯ ಕಾವ್ಯವೆಂದು ಉಲ್ಲೇಖಿಸಲಾಗಿದೆ.

20 ನೆಯ ಶತಮಾನದಲ್ಲಿ ಕೊಡ ಜಗ್ಗೂ ವೆಂಕಟಾಚಾರ್ಯ, ಜಗ್ಗೂ ವಕುಲಭೂಷಣ (ಅಥವಾ ಅಳ್ವಾರ್ ಐಯಂಗಾರ್), ಕೆ. ಎಸ್. ನಾಗರಾಜನ್ ಅವರು ಸಂಸ್ಕೃತ ಸಾಹಿತ್ಯಕ್ಕೆ ಕೊಡುಗೆಯನ್ನು ನೀಡಿದ್ದಾರೆ. ಜಗ್ಗೂ ವೆಂಕಟಾಚಾರ್ಯರು ಕನ್ನಂಬಾಡಿಯ ಮೇಲೆ 'ಕಾವೇರೀ ಮಹಿಮಾದರ್ಶ"ವನ್ನೂ ಹುಲಿಕೇರಿಯ ಸುರಂಗದ ಮೇಲೆ 'ವ್ಯಾಘ್ರತಟಾಕ ಭೂವಿವರ-ವರ್ಣನ"ವನ್ನೂ ಬರೆದರು. ಜಗ್ಗು ಆಳ್ವಾರ್ ಐಯಂಗಾರ್ ಅವರು 'ಸ್ಯಮಂತಕ' ಮತ್ತು 'ಅದ್ಭುತಾಂಶುಕ" ಗಳೆಂಬ ನಾಟಕಗಳನ್ನೂ, "ಜಯಂತಿಕಾ" ಎಂಬ ಗದ್ಯಕಾವ್ಯವನ್ನೂ ಮತ್ತಿತರ ಲಘುಕಾವ್ಯಗಳನ್ನೂ ಬರೆದಿದ್ದಾರೆ. ಕೆ. ಎಸ್. ನಾಗರಾಜನ್ ಅವರು, 'ಸೀತಾಸ್ವಯಂವರ" ವೆಂಬ 16 ಸರ್ಗಗಳ ಮಹಾಕಾವ್ಯವನ್ನು ಬರೆದಿದ್ದಾರೆ. ಇವರ ಇತರ ಕವಿತೆಗಳ ಸಂಗ್ರಹಕ್ಕೆ 'ಸ್ತೋತ್ರಮುಕ್ತಾಫಲ" ಎಂದು ಕರೆದಿದ್ದಾರೆ. ಹೀಗೆ ಸಂಸ್ಕೃತ ಸಾಹಿತ್ಯವು ಕರ್ನಾಟಕದಲ್ಲಿ ಜೀವಂತವಾಗಿದೆ. ಸಂಸ್ಕೃತ ಸಾಹಿತ್ಯಕ್ಕೆ ಕನ್ನಡ ಕವಿಗಳ ಕೊಡುಗೆಯನ್ನು ಸ್ಥೂಲವಾಗಿ ಪರಿಗಣಿಸಿದ ಈ ಯತ್ನದಲ್ಲಿ ಅನೇಕ ಕವಿಗಳನ್ನೂ, ಕಾವ್ಯಗಳನ್ನೂ ಹೆಸರಿಸುವುದೂ ಆಗಿಲ್ಲ ಎಂಬುದು ಗೊತ್ತು. ವಿದ್ವಾಂಸರು ಇದನ್ನು ಉದಾರವಾದ ದೃಷ್ಟಿಯಿಂದ ನೋಡುತ್ತಾರೆಂದು ನಂಬಿದ್ದೇನೆ. ಒಟ್ಟಿನಲ್ಲಿ ಸಂಸ್ಕೃತ ಸಾಹಿತ್ಯಕ್ಕೆ ಕನ್ನಡಿಗರ ಕೊಡುಗೆ ಯಾವುದೇ ಪ್ರದೇಶದ ಕೊಡುಗೆಗಿಂತ ಕಡಿಮೆಯಾಗಿಲ್ಲ ಎಂಬುದನ್ನುಮನಗಾಣಲು ಈ ಭಾಷಣವು ಸಾಧನವಾದರೆ ಈ ಪ್ರಯತ್ನ ಸಾರ್ಥಕವೆಂದು ಭಾವಿಸುತ್ತೇನೆ.

( ಅಕಾಶವಾಣಿಯ ರಸಮಂಜರಿ ಕಾರ್ಯಕ್ರಮದಿಂದ. )

## ಕಾವ್ಯವಾಹಿನಿ



# ಜೀವನ

—ಮೋ. ಯ. ರುದ್ರೇಶ್.

ಜೀವನದ ಪಥದಿಂದಲೇ ಮೊಳೆವುದು ಪ್ರೀತಿ, ನೀತಿ
ಪ್ರೀತಿಗೂ, ಜೀವನಕೂ ಇರುವುದು ಸಾರಸತ್ವ ನೀತಿ
ಜೆಂಗಾಡಿನಲಿ ಜೀವನವು ಸಾಗುತಿದೆ, ಎಡರುತಿದೆ
ಇದೊಂದು ಪರಕೀಯ ಭಾಷೆ; ಇನ್ನು ಕಲಿಬೇಕು ಬೇಡೆ
ನ್ನದೆ.

ಇದು ತುಂಬಿದೆ ಸಂತಸದ ಚಿಲುಮೆಯಿಂದ; ಆದರೂ ಜನ
ಗಳೆಲ್ಲಾ ಎಚ್ಚರತಪ್ಪಿ ತೊಳಲಾಡುವರು ಇಲ್ಲಿ
ದೇವತೆಗಳೆ ನಾವು ? ಎಂದೆಂದಿಗೂ ಅಲ್ಲ, ದಿನದ ಮಾತಿನ
ಜಾಡು ಅರಿತು ಮಿಂಚಿನ ತೆರದಿ ಬರಲಿ ಮಾತು ಬಾಯಲ್ಲಿ.

ಮಾತಿಗೇಕೆ ಬಡತನ? ಹುಟ್ಟಿ ಬರಲಿ ಚಿನ್ನದ ಮಾತಿನ ಕಂತೆ
ಜೀವನದ ನೈತಿಕಮಟ್ಟ ಕುಸಿಯುತಿಹುದು ಈಗ
ಬೆಳೆದು ಬರಲಿ ಉನ್ನತವಾದ ಸ್ವಾರ್ಥವಿಲ್ಲದ ತ್ಯಾಗವು
ವಯಸು ಯಾರನು ಕೇಳದೆ ಮುನ್ನುಗ್ಗುತಿದೆ ಬೇಗ ಬೇಗ.

ಸ್ವಾರ್ಥರಹಿತ ಜೀವನವೆ ಚಿನ್ನ ನಮಗೆಲ್ಲರಿಗೂ
ತಲೆಗೆ ಏಕೆ ಬೇಕು ಚಪ್ಪಲಿ ? ಪಾದಕೆ ಸಾಕು
ಇನ್ನಾದರೂ ಜೀವನದ ನೈತಿಕಮಟ್ಟ ಚಿಗುರಿ
ಮುಂದೆ 'ಅನುಭವಾಮೃತ'ವ ಪಾನಮಾಡಿರಿ

ಪಯಣಿಗರು ನಾವೆಲ್ಲಾ, ಇಲ್ಲೆ ಇರುವವರೂ ಅಲ್ಲ
ಇರುವ ಪೂರ ದಿನ 'ಸಜ್ಜನ' ಎಂದೆನ್ನಲಿ ಜನ
ಆಳವಿಹುದು ಇದು, ಕೊನೆಗೆ ಮುಳುಗುವೆವು;
ಇಲ್ಲಿಂದೆದ್ದು ಬರುವುದಷ್ಟು ಸುಲಭವೇ ನಾವು ?

# ಸಿದ್ಧಗಂಗೆ ಶ್ರೀ

"ವಿವೇಕಾನಂದ"

ಕಲ್ಲು ಕಂಟಿ ಲಿಂಗ ಆದರ ।                ॥ಭೋ॥
ಮೇಲೆ ನೀಲ ನಭದ ಛತ್ರ ।
ಮೆಲ್ಲುಲಿಯುವ ಹಕ್ಕಿಗಳಿಂ ಚರದ ಮಂಗಳ ॥
ಸೊಲ್ಲು ಎಲ್ಲಿ ಕೇಳಲಿಲ್ಲ ।
ಎಲ್ಲಿ ನೋಡಲಲ್ಲಿ ಹಸಿರು ।
ನೆಲದ ಗಟ್ಟಿ ಮೆರೆಯುತಿರುವದಲ್ಲಿ ಸಿದ್ಧಗಂಗೆ ಶ್ರೀ ॥

ಮೂಡಣದಿ ಮೂಡುವಾ ಭೂಮಂಡಲದೊಡಯನು ।        ॥ವಾ॥
ಮೂಡಿ ಬಂದನು ಸಿದ್ಧಗಂಗೆ ಶ್ರೀ ರೂಹಿನೊಳು ।
ಮೂಢನಂಬಿಕೆಗಳ ನಿವಾರಿಸಲು ಸಮಾಜದ ಜ ಡತೆನೀಗಿಸಲುಇಲ್ಲಿ
ನಡೆವ ದಾರಿಯೊಳು ಅಡಿಗಡಿಗೆ ಬೆಂಬಿಡದ ಕಡು.
ಪೆಡಂಭೂತಂಗಳನು ಗಡಗಡನೆ ಛಲದಿಂದ ।
ಒಡನೆಓಡಿಸಿಮೆಟ್ಟನಿಂದನುಯತಿವರಶಿವಕುಮಾರಸ್ವಾಮಿಇಲ್ಲಿ ॥

ಹೊಳೆವ ಕಂಗಳ ಒಳಾಂಗಳದೋಳ್ ।              ॥ಭಾ॥
ಬೆಳಗುತಿದೆ ಬೆಳಗಿನೊಳು ಮಂಗಳ ।
ಬೆಳದು ದೀವಿಗೆ ಕಳೆದು ತಾಮಸ ಬೆಳಸಿ ತಾಪಸವ ॥
ಆಳು ಆರಡಿ ಎತ್ತರ ನಿಲುವು
ತಾಳಿ ನಿಂದಿಹ ಷಡು ಸ್ಥಲವನು
ತಳೆದು ನಿಂದಿಹ ನಿತ್ಯ ಶಿವಯೋಗದಾ ಭಾವದೊಳು ॥

ಅವನಧರದಂಚಲ್ಲಿ ।                      ॥ಕು॥
ಅವನ ನುಡಿ ಮಿಂಚಲ್ಲಿ ।
ಅವನೊಡಲ ಮಡಿಲಲ್ಲಿ ಧರೆಯಡಗಿದೆ ॥
ಅವನುಡಿಗೆ ಚಲುವಲ್ಲಿ ।
ಅವನೊಲವ ಹೂವಲ್ಲಿ ।
ಅವನಾತ್ಮ ನೆರಳಲ್ಲಿನಾತ ನೆಲೆಸಿದೆ ॥

ಜಾಗಿಂತ ನೀತಿಯು ನುಡಿಗಿಂತ ನಡೆ ಮೇಲು ।       ॥ವಾ॥
ಶಾಂತಿ ಮೇಲು ಕೇಳು ಭ್ರಾಂತಿಗಿಂತ ಜಗದೊಳ ।
ಗತಿ ಮೇಲು ಮಾನವನಿಗೆ ಕಾಯಕ. ಇವುಗಳಾಚರಣೆಯೇ
ಸ್ವರ್ಗವದು ಮ ॥
ರೆತೊಡೆ ರವರವ ನರಕ ತಪ್ಪದು ಕೇಳೆಂದು ।
ಸೂತಕಾದಿಗಳು ಮೊದಲಿಲ್ಲ ಶರಣರಿಗೆಂದು
ನಿತ್ಯ ಆ ನಿಜದೊಳಗೆ ನಿಂದಿಹ ನಿರಂಜನಪ್ರಣವಿ ಸಿದ್ಧಗಂಗಾಶ್ರೀ

ಅರಳು ಮಲ್ಲಿಗೆ ಇರುಳ ಚಿಂತೆಯು ।              ॥ಬಾ॥
ಕಾರ್ಮುಗಿಲಿಗೆ ಧರೆಗಿಳಿದು ಕಡಲೊಡು ಬೆರವ ಚಿಂತೆಯು ॥
ಕರೆವ ಹಸುವಿಗೆ ಕರುವ ಚಿಂತೆಯು ।
ಪರತರ ಮುಕುತಿಗೆ ಸದ್ಗುರುವೇ
ಪರಿಪರಿಯು ನಿಮ್ಮ ಪಾದ ಚಿಂತೆ ಸಿದ್ಧಗಂಗಾ ಶ್ರೀ



# ನ ಕಾಯುವವನು ಚೀಫ್ ಎಂಜಿನಿಯರ್ ಆದ

—ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ.

ಪೃಥ್ವಿಯ ಇತಿಹಾಸದಲ್ಲಿ 1824 ಸೆಪ್ಟೆಂಬರ್, 27 ನೆಯ ತಾರೀಕು ಬಹು ಮಹತ್ವದ ದಿನ. ಅಂದು ರೈಲಿನ ಪಿತಾಮಹನಾದ ಜಾರ್ಜ್ ಸ್ಟೀಫನ್ಸನ್ ಜಗತ್ತಿನ ಮೊದಲನೆ ರೈಲನ್ನು ನಡೆಸಿದ. ಆ ದಿನ ರೈಲಿನ ಯುಗ ಆರಂಭಿಸಿತು.

ಜಾರ್ಜನು 1791 ರಲ್ಲಿ ಕಡು ದಾರಿದ್ರ್ಯದ ಕುಟುಂಬದಲ್ಲಿ ಒಂದು ಹಳ್ಳಿಯಲ್ಲಿ ಜನಿಸಿದ. ಅವನ ತಂದೆ ರಾಬರ್ಟ್ ಒಂದು ಕಲ್ಲಿದ್ದಲ ಗಣಿಯಲ್ಲಿ ಫೈರ್ ಮ್ಯಾನ್ ಆಗಿದ್ದ. ತಾಯಿ ಒಬ್ಬ ಬಣ್ಣ ಬಳಿಯುವವನ ಮಗಳು. ಅಷ್ಟು ಸ್ವಲ್ಪ ವರಮಾನದಲ್ಲಿ ಅವರ ಆರು ಮಕ್ಕಳಲ್ಲಿ ಯಾರನ್ನೂ ಶಾಲೆಗೆ ೞರಿಸಲು ಅಸಾಧ್ಯವಾಗಿತ್ತು.

ಜಾರ್ಜನು ದಿನಕ್ಕೆ ಎರಡು ಪೆನ್ನಿ ಕೂಲಿಯಲ್ಲಿ ದನ ಕಾಯುವ ಜೀತಕ್ಕೆ ಸೇರಿದ. ನಂತರ ನೇಗಿಲಿನಿಂದ ಉಳುವ ಕುದುರೆಗಳನ್ನು ಕಾಯಲು ದಿನಕ್ಕೆ ನಾಲ್ಕು ಪೆನ್ನಿ ಜೀತ ಪಡೆದ. ಆಮೇಲೆ ಗಣಿಯ ಕಲ್ಲಿದ್ದಲಿನಲ್ಲಿ ಕಲ್ಲುಗಳನ್ನೂ ಕಸವನ್ನೂ ಆರಿಸಿ ತೆಗೆಯಲು ಆರು ಪೆನ್ನಿ ದಿನಗೂಲಿಗೆ ಸೇರಿದ. 14 ನೇ ವಯಸ್ಸಿನಲ್ಲಿ ತನ್ನ ತಂದೆಗೆ ಸಹಾಯಕ-ಫೈರ್‌ಮನ್ ಆಗಿ ಒಂದು ಷಿಲಿಂಗ್ ದಿನಗೂಲಿ ಪಡೆದ. 15 ನೇ ವರ್ಷದಲ್ಲಿ ಒಂದು ಕಡೆ ಫೈರ್‌ಮನ್ ಆಗಿ ವಾರಕ್ಕೆ 12 ಷಿಲಿಂಗ್ ಕೂಲಿ ಸಿಕ್ಕಿದಾಗ ತನ್ನ ಜೀವನದ ಮಹಾಭಾಗ್ಯವೆಂದು ತಿಳಿದ.

ಚಿಕ್ಕಂದಿನಿಂದ ಅವನಿಗೆ ಯಂತ್ರಗಳಲ್ಲಿ ಅಭಿರುಚಿ ಇತ್ತು. ಹೊಯಿಲುಗಳಲ್ಲಿ ಸಣ್ಣ ನೀರು ಮಿಲ್‌ಗಳನ್ನು ಕಟ್ಟುತ್ತಿದ್ದ. ಜೇಡಿಮಣ್ಣಿನಿಂದ ಎಂಜಿನ್ ನಮೂನೆಗಳನ್ನು ತಯಾರಿಸುತ್ತಿದ್ದ. 18 ನೇ ವಯಸ್ಸಿನಲ್ಲಿ ಒಂದು ಎಂಜಿನ್ ನೋಡಿಕೊಳ್ಳುವ ವೃತ್ತಿ ಅವನಿಗೆ ದೊರೆಯಿತು. ಆ ವಯಸ್ಸಿನಲ್ಲೂ ಅವನಿಗೆ ಓದು ಬರಹದ ಗಂಧವೇ ಇರಲಿಲ್ಲ. ಓದು ಬರಹದ ಅಗತ್ಯವನ್ನು ಗ್ರಹಿಸಿ ವಾರಕ್ಕೆ ನಾಲ್ಕು ಪೆನ್ನಿ ಕೊಟ್ಟು ಕೂಲಿ ಮಕ್ಕಳ ರಾತ್ರಿ-ಶಾಲೆಯಲ್ಲಿ ಬಹುಮುತುವರ್ಜಿಯಿಂದ ಓದು ಬರಹ, ಗಣಿತವನ್ನು ಕಲಿತ. 20 ನೇ ವಯಸ್ಸಿನಲ್ಲಿ ಗಣಿಯಿಂದ ಕಲ್ಲಿದ್ದಲನ್ನು ಎಳೆಯುತ್ತಿದ್ದ ಒಂದು ಎಂಜಿನ್ನಿಗೆ "ಬ್ರೇಕ್‌ಮನ್" ಆಗಿ ವಾರಕ್ಕೆ ಒಂದು ಪೌಂಡು ಪಡೆಯುತ್ತಿದ್ದ. ಮದುವೆಯಾಗಲು ತಕ್ಕಷ್ಟು ಹಣವಿಲ್ಲದೆ ವಿರಾಮ ಕಾಲದಲ್ಲಿ ಚಮ್ಮಾರನಾಗಿ ಜೋಡು ಹೊಲಿಯುತ್ತಾ ದುಡ್ಡು ಸಂಪಾದಿಸಿ ಮದುವೆ ಮಾಡಿಕೊಂಡ. ಜೋಡು ಹೊಲಿಯುವಾಗಲೂ ಪುಸ್ತಕಗಳನ್ನು ವ್ಯಾಸಂಗ ಮಾಡುತ್ತಿದ್ದ. ಕ್ರಮೇಣ ಎಂಜಿನ್‌ಮನ್ ಆದ. ಮೆಕ್ಯಾನಿಕ್ಸ್ ತತ್ವಗಳನ್ನು ಬಹು ಉತ್ಸಾಹದಿಂದ ಕಲಿತು ಎಂಜಿನ್ ಕೆಲಸದ ರಹಸ್ಯಗಳಲ್ಲಿ ಬಹು ನಿಪುಣನಾದ. ಬೆಂಕಿಗೆ ತಗಲಿ ಕೆಟ್ಟು ಹೋಗಿದ್ದ ನೆರೆಯವನ ಗಡಿಯಾರದ ಭಾಗಗಳನ್ನೆಲ್ಲಾ ಕೂಲಂಕಷವಾಗಿ ಪರೀಕ್ಷಿಸಿ ಅದರ ದುರಸ್ತನ್ನು ಕಲಿತ. ದ್ರವ್ಯಾರ್ಜನೆಗೆ ಇತರರ ಗಡಿಯಾರಗಳನ್ನು ರಾತ್ರಿವೇಳೆ ಸರಿಮಾಡುತ್ತಿದ್ದ.

ಮದುವೆಯಾದ ಮೂರು ವರ್ಷಗಳಲ್ಲಿ ಅವನ ಹೆಂಡತಿ ರಾಬರ್ಟ್ ಎಂಬ ಮಗುವನ್ನು ಬಿಟ್ಟು ಕ್ಷಯದಿಂದ ತೀರಿಕೊಂಡಳು. ಆ ಕಾಲ ಅವನ ಜೀವಮಾನದ

ಅತ್ಯಂತ ಕಠೋರ ದಿನಗಳು, ಜೀವನದಲ್ಲಿ ನಿರಾಶನಾಗಿ ಅಂಧಕಾರದಿಂದ ಪಾರಾಗಲು ಪರದೇಶಕ್ಕೆ ಒಕ್ಕಲು ಹೋಗಲು ನಿಶ್ಚಯಿಸಿದ. ಆದರೆ ಅದಕ್ಕೂ ಅಡ್ಡಿ ಆತಂಕಗಳು ಬಂದವು. ಅವನ ತಂದೆ ಅಪಘಾತಕ್ಕೆ ಸಿಕ್ಕಿಕೊಂಡು ಕೆಲಸಮಾಡಲು ಅಶಕ್ತನಾದ. ತಾಯಿ ತಂದೆಗಳ ಪಾಲನೆಯ ಭಾರವೂ ಅವನ ತಲೆಯ ಮೇಲೆ ಬಿತ್ತು. ಆ ಕಾಲದಲ್ಲಿ ಇಂಗ್ಲೇಂಡಿಗೆ ಯುದ್ಧ ಬಂದೊದಗಿ ಜಾರ್ಜನು ಸೇನೆಗೆ ಸೇರುವುದು ಕಡ್ಡಾಯವಾಗಿತ್ತು. ಇನ್ನೊಬ್ಬನಿಗೆ ದುಡ್ಡು ಕೊಟ್ಟು ತನ್ನ ಬದಲು ಅವನನ್ನು ಕಳುಹಿಸಿದ.

29ನೇ ವಯಸ್ಸಿನಲ್ಲಿ ಜಾರ್ಜನ ಪುಣ್ಯೋದಯವಾಯಿತು. ಕಿಲ್ಲಿಂಗ್‌ವರ್ಕ್ ಗಣಿಯ ಎಂಜಿನ್‌ಗಳನ್ನು ನಡೆಸುವ ಕಾರ್ಯವನ್ನು ಅವನಿಗೆ ವಹಿಸಲಾಯಿತು. ಪ್ರತಿ ಶನಿವಾರ ಇಡೀ ಯಂತ್ರಗಳ ಭಾಗಗಳನ್ನೆಲ್ಲ ಕಳಚಿ ಪುನಃ ಸೇರಿಸುವುದನ್ನು ಚೆನ್ನಾಗಿ ರೂಢಿಸಿದ. ಮೂರು ವರ್ಷಗಳ ನಂತರ ಒಂದು ಹೊಸ ಕಲ್ಲಿದ್ದಲು ಗಣಿಯನ್ನು ತೋಡುತ್ತಿದ್ದಾಗ ನೀರು ಧಾರಾಕಾರವಾಗಿ ನುಗ್ಗಿಬಂದು, ಅದನ್ನು ಹೊರಗೆ ಒಗೆಯಲು ಪಂಪ್ ಮಾಡುವ ಎಂಜನ್ ಮುರಿದು ಹೋಯಿತು. ಅದನ್ನು ಸರಿ ಮಾಡಲು ಯಾವ ಎಂಜಿನಿಯರುಗಳಿಗೂ ಸಾಧ್ಯವಾಗದೆ, ಒಂದು ವರ್ಷಕಾಲ ನೀರು ಅಲ್ಲೇ ನಿಂತು ಕೆಳಗೆ ಯಾರು ಹೋಗಲು ಸಾಧ್ಯವಾಗಲಿಲ್ಲ. ಪ್ರಖ್ಯಾತ ಎಂಜಿನಿಯರುಗಳೂ ಕೈಬಿಟ್ಟಿದ್ದನ್ನು ಸ್ಟೀಫನ್ಸನ್ನನು ಸರಿಮಾಡಿದ. ಮುಖ್ಯಸ್ಥರು ಅವನಿಗೆ ಹತ್ತು ಪೌಂಡು ಬಹುಮಾನ ಕೊಟ್ಟು, ವರ್ಷಕ್ಕೆ 100 ಪೌಂಡ್ ಸಂಬಳದ ಮೇಲೆ ಅವನನ್ನು ಗಣಿಯ "ಎಂಜಿನ್ರೈಟ್" ಹುದ್ದೆಗೆ ನೇಮಿಸಿದರು.

ಆ ಕಾಲದಲ್ಲಿ ವಿದ್ಯುದ್ದೀಪ ಇನ್ನೂ ಬಂದಿರಲಿಲ್ಲವಾದ್ದರಿಂದ ಗಣಿಯ ಕೆಲಸಗಾರರು, ಕೆಳಗೆ ಕತ್ತಲೆಯಲ್ಲಿ ಸಾಧಾರಣ ದೀಪವನ್ನು ಒಯ್ಯಬೇಕಾಗಿತ್ತು. "ಫೈರ್‌ಡ್ಯಾಂಪ್" ಎಂಬ ಕೋಲ್‌ನ್ಯಾಸ್ ದೀಪಕ್ಕೆ ಹತ್ತಿಕೊಂಡು ಜನರಿಗೆ ಭೀಕರ ಮರಣವಾಗುತ್ತಿತ್ತು. ಕೆಲ್ಲಿಂಗ್‌ವರ್ಕ್ ಗಣಿಯಲ್ಲಿ ಒಂದೇ ಸ್ಫೋಟದಿಂದ ಹತ್ತು ಮಂದಿ ಮಡಿದರು. ಸ್ಟೀಫನ್ಸನ್ನನಿಗೆ ಭೌತಿಕಶಾಸ್ತ್ರ ರಸಾಯನ ಶಾಸ್ತ್ರಗಳ ಅರಿವಿಲ್ಲದಿದ್ದರೂ ಅವನು ಬಹು ಚಾತುರ್ಯ, ತಾಳ್ಮೆಯಿಂದ ಸಂರಕ್ಷಣೆಯ ದೀಪವನ್ನು ಕಂಡು ಹಿಡಿದ. ಅದ್ವಿತೀಯ ವಿಜ್ಞಾನಿಯೆಂದು ಜಗದ್ವಿಖ್ಯಾತನಾಗಿದ್ದ ಸರ್ ಹಂಪ್ರಿ ಡೇವಿಯೂ ಅದೇ ಕಾಲದಲ್ಲಿ ಸಂರಕ್ಷಣಾ ದೀಪವನ್ನು ಕಂಡುಹಿಡಿದ. ಇವರಿಬ್ಬರಿಗೂ ವಾದ ವಿವಾದಗಳು ನಡೆದವು. ಸಾರ್ವಜನಿಕರು ಸ್ಟೀಫನ್ಸನ್ನನ ದೀಪವನ್ನು ಮೆಚ್ಚಿ ಅದಕ್ಕೆ ಅಕ್ಕರೆಯಿಂದ "ಜಾರ್ಜೀ" ಎಂಬ ಹೆಸರಿಟ್ಟು ಅವನಿಗೆ 1000 ಪೌಂಡುಗಳನ್ನು ಬಹುಮಾನವಾಗಿ ಕೊಟ್ಟರು.

ಆ ಕಾಲದಲ್ಲಿ ಕಲ್ಲಿದ್ದಲು, ಧಾನ್ಯ, ಕಬ್ಬಿಣ ಮುಂತಾದ ಹೊರೆಗಳನ್ನು ತುಂಬಿದ ವಾಹನಗಳನ್ನು ಮರ, ಕಬ್ಬಿಣದ ಕಂಬಿಗಳ ಮೇಲೆ ಕುದುರೆಗಳು ಎಳೆಯುವ ವಾಡಿಕೆಯಿತ್ತು. ಅವುಗಳನ್ನು ಎಂಜಿನ್‌ಗಳಿಂದ ಎಳೆಯಲು ಮೂವರು ಬೇರೆ ಬೇರೆ ಎಂಜಿನಿಯರುಗಳು ಬೇರೆ ಬೇರೆ ತರಹ ಎಂಜಿನ್ನುಗಳನ್ನು ಆವಿಷ್ಕರಿಸಿದರು; ಅವುಗಳಲ್ಲೊಂದೂ ಸಮರ್ಪಕವಾಗಿ ನಡೆಯಲಿಲ್ಲ. ಸ್ಟೀಫನ್ಸನ್ ಅವುಗಳನ್ನೆಲ್ಲಾ ಪರೀಕ್ಷಿಸಿ ಗಣಿಯ ಪ್ರಮುಖ ಮಾಲಿಕ ಲಾರ್ಡ್ ರೇವನ್ಸ್‌ವರ್ಕ್ ಒದಗಿಸಿದ ದ್ರವ್ಯ, ಸಲಕರಣೆಗಳಿಂದ ಶ್ರೇಷ್ಠವಾದ ಹಬೆ ಎಂಜಿನನ್ನು ನಿರ್ಮಿಸಿದ, ಸುತ್ತ ಮುತ್ತಲಿನ ಇತರ ಗಣಿ-ಮಾಲಿಕರು ತಮಗೂ ಅಂಥ ಎಂಜಿನ್‌ಗಳು ಬೇಕೆಂದು ವಿನಂತಿಸುತ್ತಿದ್ದರು. ಭೂಮಿಯ ಆಳಗಳಿಂದ ಕಲ್ಲಿದ್ದಲನ್ನು ಮೇಲಕ್ಕೆ ತರಬಲ್ಲ ಎಂಜಿನ್‌ಗಳನ್ನೂ ನಿರ್ಮಿಸಿ, ಕುದುರೆಗಳ ಸಂಖ್ಯೆಗಳನ್ನು 100 ರಿಂದ 15 ಕ್ಕೆ ಇಳಿಸಿದ.

ಎರಕ ಕಬ್ಬಿಣದ ರೈಲು ಕಂಬಿಗಳನ್ನು ಹಾಕಿ ಭಾರದ ಸಾಮಾನುಗಳ ಗಾಡಿಗಳನ್ನು ಕುದುರೆಗಳು ಎಳೆಯುವ ವ್ಯವಸ್ಥೆಗೆ ಪಾರ್ಲಿಮೆಂಟ್ ಅನುಮತಿ ಕೊಟ್ಟಿತು. ಕುದುರೆಗಳ ಬದಲು ಹಬೆಎಂಜಿನ್ ಉಪಯೋಗಿಸಬೇಕೆಂದು ಸ್ಟೀಫನ್ಸನ್ ಪ್ರಭಾವಶಾಲಿ ಎಂಜಿನಿಯರುಗಳನ್ನೂ ಪಾರ್ಲಿಮೆಂಟಿನ ಮಂಡಲಿಯವರನ್ನು ಒಪ್ಪಿಸಿದ. ರೈಲ್ವೆ ಕಂಪನಿಯವರು ಅವನನ್ನು ವರ್ಷಕ್ಕೆ 200 ಪೌಂಡು ಸಂಬಳದ ಮೇಲೆ ತಮ್ಮ ಎಂಜಿನಿಯರನ್ನಾಗಿ ನೇಮಿಸಿದರು. ಬಹು ಪರಿಶ್ರಮಿಸಿ ತಾನೇ ಸರ್ವೆ ಮಾಡಿದ. ಕೆಲಸಕ್ಕೆ ಸಹಕಾರಿಗಳನ್ನು ತರಬೇತಿ ಮಾಡಿದ. ಎಂಜಿನ್ ತಯಾರಿಕೆಗೆ ತಕ್ಕ ಕಾರ್ಖಾನೆಯನ್ನು ಸ್ಥಾಪಿಸಲು ಸಂರಕ್ಷಣಾ ದೀಪದಿಂದ ತನಗೆ ಬಹುಮಾನವಾಗಿ ಸಿಕ್ಕಿದ್ದ 1000 ಪೌಂಡುಗಳನ್ನು ಖರ್ಚಿಗೆ ಕೊಟ್ಟ. ರೈಲು ಕಂಬಿ ಡಿಜೈನ್, ತಯಾರಿ, ರೈಲು ಮಾರ್ಗ ನಿರ್ಮಾಣ ಮುಂತಾದವುಗಳನ್ನು ಅವನಿಗೆ ಯಾರೂ ಹೇಳಿಗೊಡದಿದ್ದರೂ ತಾನೇ ಬಹು ಕೌಶಲ್ಯದಿಂದ ನಿರ್ವಹಿಸಿದ. 27-9-1825 ರಂದು ಹಬೆ ಎಂಜಿನ್ ರೈಲು ಗಾಡಿಗಳನ್ನು ಎಳೆಯುವ ಪ್ರದರ್ಶನವು ವೃತ್ತ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಜನಜಂಗುಳಿ ಕಿಕ್ಕಿರಿದು ನೆರೆದಿತ್ತು. ರೈಲು ಎಂಜಿನ್‌ಗಳ ತಯಾರಿಕೆ ಮೂರು ವರ್ಷಗಳಿಂದ ನಡೆಯುತಿತ್ತು. ಎಂಜಿನ್ ಗಾಡಿಗಳನ್ನೆಳೆಯುವುದು ಅಸಾಧ್ಯ ಅದೊಂದು ಹುಚ್ಚು ಯೋಜನೆಯೆಂದು ಎಲ್ಲರೂ ದೃಢವಾಗಿ ನಂಬಿದ್ದರು. ಕಲ್ಲಿದ್ದಲು ಮತ್ತು ಇತರ ಸಾಮಾನುಗಳು ತುಂಬಿದ್ದ 12 ವ್ಯಾಗನ್‌ಗಳೂ, ಡೈರೆಕ್ಟರ್ ಮತ್ತು ಮಾಲಿಕರ ಕೋಚ್ ಗಾಡಿಯೂ, ಕಾರೆಗಾರರೂ, ಇತರರೂ ಭರ್ತಿಯಾಗಿ ತುಂಬಿದ್ದ 20 ವ್ಯಾಗನ್‌ಗಳೂ ಸೇರಿಕೊಂಡಿದ್ದ ಎಂಜಿನ್ನನ್ನು ನಡೆಸಲು ಸ್ಟೀಫನ್ಸನ್ ಅಣಿ ಮಾಡಿದ್ದ. ಎಂಜಿನ್ ಗಂಟೆಗೆ 4-5 ಮೈಲಿಗಿಂತಲೂ ಹೆಚ್ಚು ವೇಗದಲ್ಲಿ ಹೋಗಲಾರದು, ಕುದುರೆ ಅದಕ್ಕಿಂತಲೂ ಜೋರಾಗಿ ಒಡುವುದೆಂಬ ಭಾವನೆಯಿಂದ ಅಶ್ವಾರೂಢನಾದ ಒಬ್ಬ ವಕ್ತಿ ಎಂಜಿನಿನ ಮುಂದೆ ಹಾಜರಾದ. ಎಂಜಿನ್ನಿನ ವೇಗದಲ್ಲಿ ಹೋಗಲು ಅನೇಕರು ಅಶ್ವಾರೂಢರಾಗಿ ಮೈದಾನದಲ್ಲಿ ನೆರೆದರು. ಎಂಜಿನ್ ಅಷ್ಟು ವ್ಯಾಗನ್‌ಗಳನ್ನೂ ಎಳೆದುಕೊಂಡು ಓಡಿತು. ಬೆಕ್ಕಸ ಬೆರಗಾದ ಪ್ರೇಕ್ಷಕರು ಆವೇಶದಿಂದ ಜಯಘೋಷ ಮಾಡಿದರು. ಸ್ಟೆಫನ್ಸನ್ ವಿಜಯ ವೀರನ ಮಹಿಮೆಯನ್ನು ಪಡೆದು ಇತಿಹಾಸಪ್ರಸಿದ್ಧ ಪುರುಷನಾದನು. ಅವನು ಎಂಜಿನ್ನನ್ನು ಗಂಟೆಗೆ 12½ ಮೈಲಿ ವೇಗದಲ್ಲಿ ಓಡಿಸಲು, ಕುದುರೆಯ ಮೇಲೆ ನಾಗಾಲೋಟದಲ್ಲಿ ಓಡಿಸುತಿದ್ದವರೆಲ್ಲರೂ ಹಿಂದೆಬಿದ್ದರು.

ಲಿವರ್‌ಪೂಲ್‌ನಿಂದ ಮಾಂಚೆಸ್ಟರ್‌ಗೆ ಪ್ರಯಾಣಿಕರಿಗೂ, ಸರಕುಗಳಿಗೂ ರೈಲುದಾರಿ ತಯಾರಿಸಲು ನೂರಾರು ವರ್ತಕರೂ, ಕಾರ್ಖಾನೆ ಮಾಲಿಕರೂ ಸ್ಟೆಫನ್ಸನ್‌ನ್ನು ಎಂಜಿನಿಯರನ್ನಾಗಿ ಚುನಾಯಿಸಿದರು. ಆದರೆ ಅನೇಕ ಶತ್ರುಗಳೂ ಇದಕ್ಕೆ ವಿರೋಧಿಗಳಾಗಿ ನಿಂತರು. ತಮ್ಮ ಮರಗಳು ಜಮೀನುಗಳು ಕೆಡುವುವೆಂದೂ, ಮನೆಗಳೂ, ಬೆಳೆಗಳು ಎಂಜಿನ್ನಿನ ಬೆಂಕಿ ಹೋಗೆಯಿಂದ ನಾಶವಾಗುವುವೆಂದೂ ಜನರು ಭಾವಿಸಿದರು. ಕುದುರೆ ಗಾಡಿಗಳ ಮಾಲಿಕರು ತಮ್ಮ ಉತ್ಪತ್ತಿ ಕ್ಷಣಿಸುವುದೆಂದು ಪ್ರತಿಭಟಿಸಿದರು. ಡ್ಯೂಕ್ ಆಫ್ ಕ್ಲೀವ್‌ಲೆಂಡ್ ಎಂಬಾತ ರೈಲು ಮಾರ್ಗವು ತನ್ನ ಭೂಮಿಯನ್ನು ಹಾಯುವುದೆಂಬ ಸ್ವಾರ್ಥತೆಯಿಂದ ಪಾರ್ಲಿಮೆಂಟ್‌ನಲ್ಲಿ ಈ ಮಸೂದಗೆ ವಿರದ್ಧವಾಗಿ ಚರ್ಚಿಸಿದ. ಜನರು ಗುದ್ದಲಿ, ಪಿಕಾಸಿಗಳಿಂದ ಸರ್ವೆಮಾಡುವವರ ಮೇಲೆ ಬೀಳತೊಡಗಿದರು, ಕಲ್ಲೆಸೆದರು. ಒಬ್ಬನನ್ನು ಹಳ್ಳದೊಳಗೆಸೆದರು. ಧೀರ ಸ್ಟೀಫನ್ಸ್ಸನನು ಎದೆಗುಂದದೆ ಪಾರ್ಲಿಮಂಟ್ ಕಮಿಟಿಯವರ ಮುಂದೆ ವಾದಿಸಿ ಅವರ ಒಪ್ಪಿಗೆ ಪಡೆದ. 63 ಸೇತುವೆಗಳನ್ನು ಕಟ್ಟುವುದು, ಕಲ್ಲುಬಂಡೆಯಲ್ಲಿ ಎರಡು ಮೈಲಿ ಉದ್ದದ ಸುರಂಗ ಕೊರೆಯುವುದು, ಕಣಿವೆಯ ತಳದ 70 ಅಡಿಯಮೇಲೆ ಒಂದೊಂದು 50 ಅಡಿ ಉದ್ದದ 9 ಕಮಾನುಗಳ ವಯಾಡಕ್ಟ್ ರಚನೆ ಮುಂತಾದವುಗಳು ನಡೆದವು. ಒಂದು ಅಗಾಧ ಜವುಗು ಪ್ರದೇಶವನ್ನು ಮುಚ್ಚಿ ರೈಲುದಾರಿ ಮಾಡುವುದು ಅಸಾಧ್ಯವೆಂದು ತಜ್ಞ ಎಂಜಿನಿಯರುಗಳು ಕಂಠೋಕ್ತವಾಗಿ ನುಡಿದರೂ ಅವನು ಅದನ್ನು ಸಾಹಸದಿಂದ ನೆರವೇರಿಸಿದ. ಹಗೆಯುಳ್ಳ ಕೆಲವು ಎಂಜಿನಿಯರುಗಳಿಗೆ ಅವನ ಎಂಜಿನ್‌ನಲ್ಲಿ ನಂಬಿಕೆ ಇರಲಿಲ್ಲ. ಉತ್ತಮ ನಮೂನೆಯ ಎಂಜಿನುಗಳನ್ನು ನಿರ್ಮಿಸಿ ಸ್ಪರ್ಧಿಸಲು ಅನೇಕ ಎಂಜಿನಿಯರುಗಳಿಗೆ ಕರೆ ಹೋಯಿತು. ಅವುಗಳಲ್ಲೆಲ್ಲಾ ಅವನ ಹೊಸ ನಮೂನೆಯ "ರಾಕೆಟ್" ಎಂಬ ಎಂಜಿನ್ ಅತ್ಯುತ್ಕೃಷ್ಟವಾದುದೆಂದು ತೀರ್ಪಾಗಿ, ಅವನಿಗೆ 500 ಪೌಂಡ್ ಸಂಭಾವನೆ ದೊರೆಯಿತು. ಅದರ ವೇಗ ಗಂಟೆಗೆ 29 ಮೈಲಿ. 15–9–1830 ರಲ್ಲಿ ಆ ರೈಲು ಹೋದಾಗ ಮುಖ್ಯ ಮಂತ್ರಿ, ಡ್ಯೂಕ್ ಆಫ್ ವೆಲಿಂಗ್ಟನ್, ಸರ್ ರಾಬರ್ಟ್ ಪೀಲ್ ಮಹಾಶಯರು ಹಾಜರಿದ್ದರು. ಅಂದಿನಿಂದ, 15 ವರ್ಷಗಳ ನಂತರ ಅವನು ನಿವೃತ್ತನಾಗುವವರೆಗೂ, ತನ್ನ ಜೀವವನ್ನು ರೈಲಿನ ಪ್ರಗತಿಗೆ ಮೀಸಲಾಗಿಟ್ಟ.

ಏಕಕಾಲದಲ್ಲಿ ಅವನು ಐದು ಹೊಸ ರೈಲು ಸಂಸ್ಥೆಗಳಿಗೆ ಚೀಫ್ ಎಂಜಿನಿಯರ್ ಆಗಿದ್ದ. ಅವನ

(28 ನೇ ಪುಟನೋಡಿ)

# "ಭೂತಾಯಿಯ ಸೇವೆ"

—ಪಿ. ಎನ್. ಚಂದ್ರಶೇಖರಯ್ಯ

ತುಮಕೂರು ತಾಲ್ಲೂಕು ಹಿರೇಹಳ್ಳಿಯಲ್ಲಿ ಅಕ್ಟೋಬರ್ 1979 ರ ಬುಧವಾರ ಕೇಂದ್ರೀಯ ತೋಟದ ಬೆಳೆಗಳ ಸಂಶೋಧನಾ ಸಂಸ್ಥೆಯ, ಕೃಷಿಮೇಳದ, ಮುಕ್ತಾಯ ಸಮಾರಂಭದ ಅಧ್ಯಕ್ಷತೆಯಲ್ಲಿ ರೈತರನ್ನುದ್ದೇಶಿಸಿ ಶ್ರೀ ಶ್ರೀ ಗಳವರು ಮಾಡಿದ ಆಶೀರ್ವಚನ.

ಮಾನ್ಯ ಜಿಲ್ಲಾಧಿಕಾರಿಗಳೇ, ರೈತ ಬಾಂಧವರೇ ಮತ್ತು ತಾಯಂದಿರೇ,

ಹೀರೆಹಳ್ಳಿ ಸಂಶೋಧನಾ ಕೇಂದ್ರದವರು ರೈತ ಬಾಂಧವರ ತಿಳಿವಳಿಕೆಗಾಗಿ ಈ ಮೂರು ದಿನದ ಸಮ್ಮೇಳನವನ್ನು ಏರ್ಪಡಿಸಿದ್ದಾರೆ. ವೈಜ್ಞಾನಿಕ ರೀತಿಯಿಂದ ಬೆಳೆದ ಬೆಳೆಯನ್ನು ತಮ್ಮ ಮುಂದೆ ಪ್ರದರ್ಶಿಸಿ ನಿಮಗೆಲ್ಲಾ ತಿಳುವಳಿಕೆಯನ್ನು ಕೊಟ್ಟು ಒಳ್ಳೆಯ ಉಪಕಾರ ಮಾಡಿದ್ದಾರೆ. ಈ ಮೂರು ದಿವಸಗಳಿಂದಲೂ ಒಳ್ಳೆಯ ಜ್ಞಾನವನ್ನು ನೀವೆಲ್ಲರೂ ಪಡೆದವರಾಗಿದ್ದೀರಿ. ಈ ದೃಷ್ಟಿಯಿಂದ ಸಂಶೋಧನಾ ಕೇಂದ್ರದವರು ಅಭಿನಂದನಾರ್ಹರು.

ನಮ್ಮ ಭರತ ಖಂಡ ಕೃಷಿ ಪ್ರಧಾನವಾದ ರಾಷ್ಟ್ರ. ರಾಷ್ಟ್ರದ ಪ್ರಗತಿ ಬಡ ರೈತರನ್ನವಲಂಬಿಸಿದೆ–ಅರ್ಥಾತ್ ವ್ಯವಸಾಯವನ್ನವಲಂಬಿಸಿದೆ. ಬಡ ರೈತನ ಜೀವನ ಮೊದಲು ಉತ್ತಮಗೊಳ್ಳಬೇಕು. ರೈತನ ಪ್ರಗತಿ ಮತ್ತು ಆತನ ಜೀವನ ಪ್ರಗತಿ ಎಲ್ಲಿಯವರೆವಿಗೆ ಉತ್ತಮಗೊಳ್ಳುವುದಿಲ್ಲನೋ ಅಲ್ಲಿಯವರೆವಿಗೂ ದೇಶವು ಉತ್ತಮ ಸ್ಥಿತಿಯನ್ನು ಹೊಂದಲಾರದು. ರಾಷ್ಟ್ರವು ಅಭಿವೃದ್ಧಿಯನ್ನು ಕಾಣಲಾರದು. ಈ ಅಭಿಪ್ರಾಯವನ್ನೇ ಮಹಾತ್ಮ ಗಾಂಧಿಯವರು ತಮ್ಮ ಜೀವಿತದ ಕಾಲದಲ್ಲಿ ಪದೇ ಪದೇ ಹೇಳುತ್ತಿದ್ದರು. ನಮಗೆ ಸ್ವಾತಂತ್ರ್ಯ ಬಂದು 32 ವರ್ಷಗಳು ಕಳೆದರೂ ವ್ಯವಸಾಯಗಾರನ ಸ್ಥಿತಿ ಉತ್ತಮಗೊಂಡಿಲ್ಲ. ಅವನ ಆರ್ಥಿಕ ಸ್ಥಿತಿ ಉತ್ತಮಗೊಂಡಿಲ್ಲ. ನಮ್ಮ ದೇಶದ ಪ್ರತಿಯೊಬ್ಬ ವ್ಯಕ್ತಿಗೂ ಇಂದು ಬೇಕಾದದ್ದು— 1) ಹೊಟ್ಟೆಯ ತುಂಬ ಊಟ 2) ಉಡಲು ಮೈತುಂಬ ಬಟ್ಟೆ 3) ವಾಸಿಸಲು ಒಂದು ಮನೆ. ಇವುಗಳು ಅವನ ನಿತ್ಯಾವಶ್ಯಕ ವಸ್ತುಗಳು. ಇವು ಇಂದು ಪ್ರತಿಯೊಬ್ಬನಿಗೂ ಅಗತ್ಯವಾಗಿ ಒದಗಬೇಕು. ಈ ಅನುಕೂಲಗಳು ಅವನಿಗೆ ದೊರೆತಾಗ ನಮ್ಮ ದೇಶಕ್ಕೆ ಕೀರ್ತಿ ಬರುತ್ತದೆ. ಅದಾಗದ ಹೊರತು ನಮ್ಮ ರಾಷ್ಟ್ರಕ್ಕೆ ಕೀರ್ತಿಯುಂಟಾಗುವುದಿಲ್ಲ. ಆದ್ದರಿಂದ ನಮ್ಮ ರಾಷ್ಟ್ರನಾಯಕರು ಸರ್ಕಾದವರು ಕೇಂದ್ರೀಯ ಸಂಸ್ಥೆಯವರು ರೈತರ ಉದ್ಧಾರಕ್ಕಾಗಿ ಅಧಿಕ ಮಟ್ಟದ ಯೋಜನೆಯ ತಿಳಿವಳಿಕೆಯನ್ನು ಕೊಡಬೇಕು. ಅವರ ಅಪಾರ ಸಹಾಯ ಸಲಕರಣೆಗಳನ್ನೊದಗಿಸಬೇಕು.

ನಮ್ಮಲ್ಲಿರುವಷ್ಟು ಭೂಮಿಯಲ್ಲಿಯೇ ಅಧಿಕ ಉತ್ಪಾದನೆಯನ್ನು ಮಾಡಬೇಕು. ಸಾಕಷ್ಟು ಬೆಳೆಯನ್ನು ತೆಗೆಯಬೇಕು. ನಮ್ಮ ಬರಡು ಜೀವನ ಉತ್ತಮಗೊಳ್ಳಬೇಕು. ಇದೇ ಈ ಸಮ್ಮೇಳನದ ಉದ್ದೇಶ. ಆ ಕಾರ್ಯ ನಮ್ಮೆಲ್ಲರಿಂದ ನಡೆದಾಗ ಸಮ್ಮೇಳನದ ಉದ್ದೇಶ ಸಾಧಿತವಾಗುತ್ತದೆ.

ಒಂದು ವಿಷಯ ಇಲ್ಲಿ ಸ್ಮರಣೆಗೆ ಬರುತ್ತದೆ. ನಮ್ಮ ಹಿಂದಿನವರು ಉತ್ತಮ ಜೀವನವನ್ನು ಸಾಗಿಸುತ್ತಿದ್ದರು. ಕಾರಣ ಅವರ ಉತ್ತಮ ವ್ಯವಸಾಯವೇ ಆಗಿತ್ತು. ಅವರ ಜೀವನ ಸುಖ, ಶಾಂತಿ, ಸಮೃದ್ಧಿಗಳಿಂದ



ಕೂಡಿದ್ದಿತು. ಇಂದು ಜನಸಂಖ್ಯೆ ಅಧಿಕವಾಗಿ ಬೆಳೆದಿದೆ. ಬೆಳೆಯುತ್ತಿದೆ. ಆದ್ದರಿಂದ ಅತ್ಯಗತ್ಯವಾದ ವಿಚಾರ ಮಾಡಬೇಕು. ಹೊಸ ಹೊಸ ಯೋಜನೆಗಳನ್ನು ಅಳವಡಿಸಿಕೊಳ್ಳಬೇಕು. ಈಗ ನಾವು ನಮ್ಮವರ ಜೀವನ ಕ್ರಮವನ್ನು ಮರೆತಿದ್ದೇವೆ. ಅನೇಕ ತೊಂದರೆಗಳಿಗೊಳಗಾಗಿದ್ದೇವೆ. ಆದ್ದರಿಂದಲೇ ನಮ್ಮ ಅಭಿವೃದ್ಧಿ ಸಾಧ್ಯವಾಗಿಲ್ಲ. ನಮ್ಮವರ ಹಿಂದಿನ ಆದರ್ಶ ಜೀವನವು ನಮ್ಮ ಅಭಿವೃದ್ಧಿಗೆ ಸಾಧಕವಾಗಬಲ್ಲುದು.

ರೈತರಿಗೆ ವಿಷಯವನ್ನು ತಿಳಿದುಕೊಳ್ಳಬೇಕೆಂಬ ಆಸಕ್ತಿ ಇರಬೇಕು. ಆಸಕ್ತಿಯಿಂದ ನೋಡಿ ತಿಳಿವಳಿಕೆಯನ್ನುಂಟು ಮಾಡಿಕೊಳ್ಳಬೇಕು. ವಿಧಾನವನ್ನರಿತು ಪರಿಣತಿಯನ್ನು ಪಡೆದು ಸೂಕ್ತವಾಗಿ ಬಳಸಿಕೊಂಡು ಅದರ ಅನುಕೂಲವನ್ನು ಪಡೆಯಬೇಕು. ಇದರಿಂದ ಹೆಚ್ಚಿನ ಪರಿಣತಿ ದೊರೆತು ಉತ್ತಮ ಫಲಿತಾಂಶವು ಸಿದ್ಧಿಸಿ ನಮ್ಮ ಅಭಿವೃದ್ಧಿಯನ್ನು ಮಾಡಿಕೊಂಡಂತಾಗುತ್ತದೆ. ಈ ದೆಸೆಯಲ್ಲಿ ಸರಕಾರ, ಸಂಸ್ಥೆಯವರು ಹಾಗೂ ಇಲಾಖೆಯವರು ಹೆಚ್ಚಿನ ಶ್ರಮವಹಿಸಿ ತಿಳಿವಳಿಕೆಯನ್ನು ಕೊಡುತ್ತಿದ್ದಾರೆ. ಅದರ ಸಂಪೂರ್ಣ ಪ್ರಯೋಜನವನ್ನು ಪಡೆದು ಉತ್ತಮ ಬೆಳೆಯನ್ನು ತೆಗೆಯಬಹುದು. ಉತ್ತಮ ಇಳುವರಿಯಿಂದ ಅಧಿಕಲಾಭ ದೊರೆಯುತ್ತದೆ. ಈ ಎಲ್ಲಾ ವಿಚಾರವನ್ನು ನೀವೇ ಪ್ರತ್ಯಕ್ಷವಾಗಿ ಮೂರು ದಿವಸಗಳಿಂದ ನೋಡಿ ತಿಳಿದುಕೊಂಡಿದ್ದೀರಿ. ನಮ್ಮ ಅಭಿವೃದ್ಧಿ ನಮ್ಮ ಕೈಯಲ್ಲಿದೆ. ಅದು ನಮ್ಮ ಕರ್ತವ್ಯವಾಗಬೇಕು. ಆಗ ನಮ್ಮ ಅಭಿವೃದ್ಧಿ ತಾನೇ ತಾನಾಗಿ ಸಾಗುತ್ತದೆ. ಇದು ನಮ್ಮ ದಿನನಿತ್ಯದ ವೃತ್ತಿಯಾಗಬೇಕು.

ನಮ್ಮಲ್ಲಿ ಯಾವುದೋ ಒಂದು ಪ್ರಬಲ ಕೊರತೆ ಎದ್ದು ಕಾಣುತ್ತದೆ. ಯಾವುದೆಂದರೆ ನಮ್ಮ ವೃತ್ತಿಯಲ್ಲಿ ಶ್ರದ್ಧೆ ನಂಬಿಕೆ ವಿಶ್ವಾಸ ಇವುಗಳಿಲ್ಲದೇ ಇರುವುದು. ನಮ್ಮ ಪೂರ್ವಿಕರು ತಾನು ಮಾಡುವ ವೃತ್ತಿಯಲ್ಲಿ ಪ್ರಬಲವಾದ ಶ್ರದ್ಧಾಭಕ್ತಿ ವಿಶ್ವಾಸಗಳನ್ನಿಟ್ಟಿದ್ದರು. ಅವರ ವೃತ್ತಿಯಲ್ಲಿಯೇ ಅಪಾರ ವಿಶ್ವಾಸವುಳ್ಳವರಾಗಿದ್ದರು. ಆವೃತ್ತಿಯ ಸೇವೆಯೇ ಶಿವಪೂಜೆ ಎಂದು ಭಾವಿಸಿಕೊಂಡರು. ಭೂಸೇವೆಯೇ ಭೂದೇವಿಯ ಸೇವೆಯಾಗಿದ್ದಿತು ಅವರಿಗೆ. ಅವರ ಸಂತೃಪ್ತ ಜೀವನಕ್ಕೆ ಈ ಭಾವನೆ ವಿಶ್ವಾಸಗಳೇ ಕಾರಣವಾಗಿದ್ದಿತು. ಈ ಸಂದರ್ಭದಲ್ಲಿ ಒಂದು ಕಥೆ ಜ್ಞಾಪಕಕ್ಕೆ ಬರುತ್ತದೆ.

ಒಮ್ಮೆ ನಾರದನು ಪರಮೇಶ್ವರನ ಸಮೀಪಕ್ಕೆ ಹೋದ. ಅಲ್ಲಿ ಅವನು ಪರಮೇಶ್ವರನನ್ನು ಕುರಿತು ಪ್ರಪಂಚದಲ್ಲಿ ಅತ್ಯಂತ ಉತ್ತಮ ಭಕ್ತನಾರು ? ಎಂದು ಕೇಳಿದನು. ಏಕೆಂದರೆ ನಾರದನು: ನಾನೇ ನಿಜವಾದ ಭಕ್ತ ನನ್ನಂತೆ ದಿನಕ್ಕೆ ಮೂರು ಭಾರಿ ಪೂಜೆ, ಜಪ, ಧ್ಯಾನ, ಮಂತ್ರ ಶಿವನಾಮಸ್ಮರಣೆ ಮಾಡುವವರು ಯಾರೂ ಇಲ್ಲ; ನನ್ನ ಬಿಟ್ಟರೆ ನಾನೇ ನಿಜವಾದ ಭಕ್ತ ಎಂಬ ನಂಬಿಕೆ ನಾರದನದು, ಆದರೆ ಪರಮೇಶ್ವರನಿಂದ ಬಂದ ಉತ್ತರ ನಾರದನನ್ನು ನಿರಾಶನನ್ನಾಗಿ ಮಾಡಿತು.

ಒಂದು ಸಣ್ಣ ಊರು–ಅಲ್ಲಿ ಒಬ್ಬ ರೈತನಿದ್ದಾನೆ. ಆತನೇ ನಿಜವಾದ ಭಕ್ತ ಹಾಗೂ ಜ್ಞಾನಿ ಎಂದ ಪರಮೇಶ್ವರ. ನಾರದನು ಅವನನ್ನು ಪರೀಕ್ಷೆ ಮಾಡಲು ಅಲ್ಲಿಗೆ ಹೋಗಿ ನೋಡಿದ. ಅವನ ಜ್ಞಾನದ ಅರಿವು ನಾರದನಿಗಾಗಲಿಲ್ಲ. ಬದಲಾಗಿ ತಾತ್ಸಾರವುಂಟಾಯಿತು. ಏಕೆಂದರೆ ಇವನು ನಾಡಾಡಿ ಮನುಷ್ಯ, ವಿದ್ಯೆಯಿಲ್ಲ, ಬುದ್ಧಿಯಿಲ್ಲ, ಪೂಜೆಯಿಲ್ಲ ಜಪತಪ ಮಾತೂ ಇಲ್ಲ ಎಂದುಕೊಂಡ, ಇವನೆಂಥ ಭಕ್ತ ಎಂದ. ಆ ರೈತನ ನಿತ್ಯದ ವ್ಯವಹಾರವೆಂದರೆ ಮುಂಜಾನೆ ಏಳುವುದು ತನ್ನ ವೃತ್ತಿಯಾದ ವ್ಯವಸಾಯ ಕಾರ್ಯವನ್ನು ಮಧ್ಯಾಹ್ನದವರೆವಿಗೂ ನಿಷ್ಠೆಯಿಂದ ಮಾಡುವುದು, ಮಧ್ಯಾಹ್ನ ಸ್ನಾನ ಮಾಡಿ ಸ್ವಲ್ಪ ಹೊತ್ತು ಭಗವಂತನ ನಾಮಸ್ಮರಣೆಮಾಡುವುದು, ಪ್ರಸಾದ ಸ್ವೀಕರಿಸುವುದು ಮತ್ತೆ ಕಾಯಕಕ್ಕೆ ತೊಡಗುವುದು. ಸಂಜೆ ಭಗವಂತನ ನಾಮಸ್ಮರಣೆ ಮಾಡುವುದೇ ಅವನ ದಿನ ನಿತ್ಯದ ಕಾರ್ಯವಾಗಿತ್ತು.

ಇದನ್ನು ನೊಡಿದ ನಾರದನು ಪರಮೇಶ್ವರನ ಹತ್ತಿರ ಬಂದು, ಅವನೆಲ್ಲೊ ನಾಡಾಡಿ ಮನುಷ್ಯ ಆತನಿಗೆ ಯಾವ ತಿಳಿವಳಿಕೆಯೂ ಇಲ್ಲ. ಎಲ್ಲೊ ದಿನಕ್ಕೆ ಅಪ್ಪಿ ತಪ್ಪಿ ನಿನ್ನ ನಾಮಸ್ಮರಣೆಮಾಡುತ್ತಾನೆ. ಅವನೇಗೆ ನಿಜವಾದ ಭಕ್ತನಾಗುತ್ತಾನೆ ಎಂದನು.

ಆಗ ಶಿವನು ನಾರದನನ್ನು ಕುರಿತು ಹೇಳಿದನು. ಅವನ ಜೀವನ ನಿನಗೆ ಅರ್ಥವಾಗಿಲ್ಲ. ಅವನಿಗೀಗ 80

ವರ್ಷಗಳು ಅಂದಿನಿಂದ ಇಂದಿನವರೆವಿಗೂ ಅವನ ವ್ಯವಸಾಯ ವೃತ್ತಿಯೇ ಅವನ ಶಿವಪೂಜೆಯಾಗಿದೆ. ಅವನ ಜೀವಿತದ ಅವಧಿಯಲ್ಲಿ ಒಂದೂ ಸುಳ್ಳು ಹೇಳಿಲ್ಲ ಮೋಸ, ವಂಚನೆ, ಪರರ ನಿಂದೆ ಅವನ ಹತ್ತಿರ ಸುಳಿದಿಲ್ಲ ದ್ವೇಷಾಸೂಯೆಗಳು ಅವನಿಗೆ ತಿಳಿದಿಲ್ಲ. ಸಚ್ಚಾರಿತ್ರ್ಯವುಳ್ಳವನೂ, ಸತ್ಯಶುದ್ಧ ಕಾಯಕವನ್ನು ಮಾಡಿ ಅಂದಿನಿಂದ ಇಂದಿನವರೆವಿಗೂ ಸೂಚಿಸಿದ್ದಾನೆ. ಒಳ್ಳೆಯದೆಲ್ಲವೂ ಅವನಲ್ಲಿದೆ. ಅವನದು ಮಹಾ ವ್ಯಕ್ತಿತ್ವ ಅವನು ಮಾಡುವ ವೃತ್ತಿಯೇ ಸಾಕ್ಷಾತ್ ಶಿವಪೂಜೆಯಾಗಿದೆ ವಿದ್ಯೆ ಬುದ್ಧಿ ಇಲ್ಲದಿದ್ದರೂ ಬಾಧಕವಿಲ್ಲ. ಅವನ ವ್ಯವಸಾಯ ಜೀವನವೇ ಭೂದೇವಿಯ ಪೂಜೆಯೆಂದು ಅವನ ಭಾವನೆಯಾಗಿದೆ. ಅವನಲ್ಲಿ ನಿಷ್ಠೆಯಿದೆ, ಶ್ರದ್ಧೆಯಿದೆ, ನಂಬಿಕೆಯಿದೆ, ಭೂದೇವಿಯಲ್ಲಿ ಪೂಜ್ಯ ಭಾವನೆಯಿದೆ, ಆದ್ದರಿಂದ ಅವನಿಗೆ ಮಂತ್ರ ತಿಳಿಯದಿದ್ದರೂ ಅವನು ನಿನಗಿಂತಲೂ ಉತ್ತಮ ಜ್ಞಾನಿ ಮತ್ತು ಭಕ್ತ. ಆದ್ದರಿಂದ ನಮ್ಮ ಹಿಂದಿನ ಪುಣ್ಯಾತ್ಮರಲ್ಲಿ ತಮ್ಮ ಈ ವ್ಯವಸಾಯ ವೃತ್ತಿಯಲ್ಲಿ ಅಚಲವಾದ ಭಕ್ತಿ ವಿಶ್ವಾಸ ನಂಬಿಕೆಗಳಿದ್ದವು. ಶ್ರದ್ಧೆ ನಿಷ್ಠೆಗಳಿದ್ದವು. ಅವರ ಜೀವನ ಸುಖ ಶಾಂತಿ ಸಮೃದ್ಧಿಗಳಿಂದ ಕೂಡಿದ್ದಿತು. ಜನಜೀವನದಲ್ಲಿ ನೆಮ್ಮದಿ ಇತ್ತು. ಇಂದು ಯಾವ ಕಾರಣವೋ ಏನೋ ಸ್ವಾತಂತ್ರ್ಯ ಬಂದ ಮೇಲೆ ಜನತೆಯಲ್ಲಿ ಒಂದು ರೀತಿಯ ಭ್ರಾಂತಿಯುಂಟಾಗಿದೆ. ಜನಜೀವನ ಅಸ್ತವ್ಯಸ್ತವಾಗಿದೆ. ದುಡಿಮೆ ಕಡಿಮೆಯಾಗಬೇಕು. ಸುಖ ಜಾಸ್ತಿಯಾಗಬೇಕು. ಶ್ರಮ ಕಡಿಮೆ ಫಲದ ಅಪೇಕ್ಷೆ ಅಧಿಕವಾಗಿದೆ. ಏನಾದರೂ ಮಾಡಿ ಅಧಿಕ ಲಾಭ ಪಡೆಯಬೇಕೆನ್ನುವ ಆಸೆ ಆಕಾಂಕ್ಷೆಗಳು ಅತಿಯಾಗಿವೆ. ಇದು ಪ್ರಜಾಪ್ರಭುತ್ವ ತತ್ವವನ್ನವಲಂಭಿಸಿರುವ ನಮ್ಮಂತ ದೇಶಕ್ಕೆ ಗಂಡಾಂತರಕಾರಿಯಾಗಿದೆ. ನಮ್ಮ ದೃಷ್ಟಿ ಬದಲಾಗಬೇಕು, ಭಗವಂತನು ನಮಗೆ ಕೊಟ್ಟಿರುವ ಕ್ರಿಯಾ ಮತ್ತು ವಾಕ್‌ಶಕ್ತಿಗಳ ಯೋಗ್ಯವಾದ ಉಪಯೋಗ ಮಾಡಿಕೊಳ್ಳಬೇಕು. ಹಾಗಾದರೆ ನಮ್ಮ ಮತ್ತು ದೇಶದ ಪ್ರಗತಿ ಸಾಧ್ಯವಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಜೀವನದಲ್ಲಿ ಪ್ರಗತಿಯನ್ನು ಕಾಣಬೇಕಾದರೆ ಆತನು ಮುಖ್ಯವಾಗಿ ಗಮನಿಸಬೇಕಾದ ಅಂಶಗಳಿಷ್ಟು. 1) ತಾನು ಮಾಡುವ ಯಾವುದೇ ವೃತ್ತಿಯಾಗಲಿ ಅದರಲ್ಲಿ ಆಸಕ್ತಿ ಇರಬೇಕು. 2) ಎರಡನೆಯದು ಶ್ರದ್ಧೆಯುಳ್ಳವನಾಗಿರಬೇಕು. 3) ಕ್ರಿಯಾಶಕ್ತಿಯ ಬಳಕೆ ಮಾಡಿಕೊಂಡು ಆವೃತ್ತಿಯಲ್ಲಿ ಕರ್ತವ್ಯ ನಿಷ್ಠನಾಗಿರಬೇಕು. 4) ಕಾಯಕದಲ್ಲಿ ನಿರತನಾದಾಗ ಮಧ್ಯೆ ಎಡರು ತೊಡರು ಬರಬಹುದು, ಬಂದರೂ ತನ್ನ ಉದ್ದೇಶವನ್ನು ಹೊಂದುವ ಉತ್ಸಾಹವು ಕಡಿಮೆಯಾಗಬಾರದು. ಮಾಡಿ ಜಯಗಳಿಸುವ ಸತ್ಸಂಕಲ್ಪವಿರಬೇಕು. ಯೋಜನೆ ನಮ್ಮನ್ನವಲಂಬಿಸಿ ಅವುಗಳ ಉಪಯೋಗ ಯೋಗ್ಯ ರೀತಿಯಲ್ಲಿ ಬಳಕೆಯಾಗಬೇಕು. ಅಷ್ಟೆ ಅಲ್ಲ ಅವುಗಳು ನಮ್ಮ ಶ್ರದ್ಧೆ, ನಿಷ್ಠೆ, ಹಾಗೂ ಪ್ರಾಮಾಣಿಕತೆಯನ್ನವಲಂಬಿಸಿವೆ. ಇಲ್ಲಿ ಬಂದಿರುವವರೆಲ್ಲರು ಬಹಳ ಮಂದಿ ರೈತರಿದ್ದೀರಿ ನೀವು ಬಾಳ್ವಿಕೆ ಮಾಡುತ್ತಿರುವ ನೆರೆ ಹೊರೆ ಚೊಕ್ಕವಾಗಿರಬೇಕು. ಇಂದು ಹಳ್ಳಿಗಳು ಕ್ಷುಲ್ಲಕ ರಾಜಕೀಯ ಕಾರಣಗಳಿಂದಾಗಿ ಹಳ್ಳಿಗಳ ವಾತಾವರಣ ಕೆಟ್ಟಿದೆ. ದ್ವೇಷಾಸೂಯೆಗಳು ಮನೆ ಮಾಡಿಕೊಂಡಿವೆ. ಈ ಕಾರಣದಿಂದಾಗಿ ಹಳ್ಳಿಗಳ ಜೀವನ ಅಧೋಗತಿಗಿಳಿಯುತ್ತಿದೆ. ವಾತಾವರಣವನ್ನು ತಿಳಿಮಾಡಿಕೊಂಡು ಕರ್ತವ್ಯ ನಿಷ್ಠರಾಗಿ ತಜ್ಞರ ತಿಳಿವಳಿಕೆಯನ್ನು ಕೊಡಲೋಸುಗ ಆಕಾಶವಾಣಿಯಲ್ಲಿ ಅನೇಕ ಸ.ಲ ಹಾ ಕಾರ್ಯಕ್ರಮಗಳನ್ನು ಪ್ರಸಾರಮಾಡುತ್ತಾರೆ. ಅವೆಲ್ಲವೂ ಮನರಂಜನೆಗಳೆಂದು ಭಾವಿಸದೆ ನಮ್ಮ ಜ್ಞಾನ ಪ್ರಸಾರಕ್ಕೆಂದು ಭಾವಿಸಬೇಕು ಅವೆಲ್ಲವುಗಳ ಉಪಯೋಗ ಮಾಡಿಕೊಂಡು ಬಾಳನ್ನು ಬಂಗಾರವಾಗಿಸಿಕೊಳ್ಳಬೇಕು. ಆದಾದಾಗ ಇಲಾಖೆಯವರು, ಸರಕಾರದವರು ಪಟ್ಟಶ್ರಮ ಸಾರ್ಥಕವಾಗುತ್ತದೆ. ಇನ್ನ ಸಾಕು, ಪರಮಾತ್ಮನು ನಿಮ್ಮೆಲ್ಲರಿಗೂ ಮಂಗಳಾಶೀರ್ವಾದವನ್ನು ಉಂಟುಮಾಡಲೆಂದು ಕೋರಿ ಮುಕ್ತಾಯ ಮಾಡುತ್ತಿದ್ದೇನೆ.

—

25 ನೇ ಪುಟದಿಂದ

ಸಲಹೆ, ಅನುಭವ ವಿನಾ ಯಾವ ಹೊಸ ಯೋಜನೆಯೂ ನಡೆಯುತ್ತಿರಲಿಲ್ಲ. ಅವನ ಪತ್ರವ್ಯವಹಾರ ಎಷ್ಟು ಬೆಳೆಯಿತೆಂದರೆ ಪ್ರತಿ ದಿನವೂ 22 ಕ್ಕಿಂತಲೂ ಕಡಿಮೆ ಇಲ್ಲದಷ್ಟು ಪತ್ರಗಳನ್ನು ಅವನು ತನ್ನ ಕಾರ್ಯದರ್ಶಿಗೆ ಬಾಯಲ್ಲಿ ಹೇಳಿ ಬರೆಸುತ್ತಿದ್ದ. ಒಮ್ಮೊಮ್ಮೆ ಎಡೆಬಿಡದೆ 12 ಗಂಟೆಗಳ ಕಾಲ ಪತ್ರ ವರದಿಗಳನ್ನು ಹೇಳಿ ಬರೆಸುತ್ತಿದ್ದ. 1845 ರ ಹೊತ್ತಿಗೆ 2883 ಮೈಲಿ ರೈಲುದಾರಿ ನಿರ್ಮಿಸಿದ್ದ.

ಕೆಲಸ, ಕೆಲಸ—ಎಡೆಬಿಡದ ಕೆಲಸ ಅವನಿಗೆ ರಕ್ತಗತವಾಗಿತ್ತು. ಬಹು ಸರಳ ಸ್ವಭಾವ. ಸರಕಾರವು ಅವನಿಗೆ ನೈಟ್‌ಹುಡ್ ಪ್ರಶಸ್ತಿಯನ್ನು ಕೊಡಲು ಅದನ್ನು ನಿರಾಕರಿದ. ಚಿನ್ನದ ತಲೆಯ ಕೋಲನ್ನು ಹಿಡಿದುಕೊಂಡು ಒಬ್ಬಾತ ಅವನ ಭೇಟಿಗೆ ಹೋದಾಗ, ಅದನ್ನು ಕಣ್ಣಿಗೆ ಕಾಣದಂತೆ ದೂರ ಇಟ್ಟು ಬಂದರೆ ಮಾತನಾಡುತ್ತೇಂದು ಹೇಳಿದ. ಅಮೇರಿಕದ ಪ್ರಖ್ಯಾತ ಸಾಹಿತಿ ಎಮರ್ಸನ್ ಅವನ ಗುಣ ಗ್ರಾಹಕ ಶಕ್ತಿಯನ್ನು ಬಹಳ ಶ್ಲಾಘಿಸಿದ. ಸ್ಟೀಫನ್ಸನ್ 97 ನೇ ವಯಸ್ಸಿನಲ್ಲಿ ಕಾಲವಾದ. ಹಬೆ ಎಂಜಿನ್ ಗಾಡಿಯ ಪಿತಾಮಹಾನೆಂಬ ಅಭಿದಾನ ಚಿರಸ್ಮರಣೀಯವಾಗಿ ನಿಂತಿದೆ. —